RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಜನವರಿ ೯, ೨೦೧೪ (ಪುಷ್ಯ ೧೯, ಶಕ ವರ್ಷ ೧೯೩೫)<br>Bangalore, Thursday, January 9, 2014 ( Pushya 19, Shaka Varsha 1935) | ಸಂಚಿಕೆ ೨<br>Issue 2 |
|---|---|---|

## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ಜಿಲ್ಲಾಡಳಿತ ಭವನ, ಎರಡನೇ ಮಹಡಿ, ಕೊಠಡಿ ಸಂಖ್ಯೆ:52,53, ಕರೂರು ಕೈಗಾರಿಕಾ ಪ್ರದೇಶ, ಪಿ.ಬಿ.ರಸ್ತೆ, ದಾವಣಗೆರೆ, ಇವರ ಕಾರ್ಯಾಲಯ**

**ವಿಷಯ:** ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ, ಚಿಕ್ಕಕುರುಬರಹಳ್ಳಿ, ಚನ್ನಗಿರಿ–ತಾ:, ದಾವಣಗೆರೆ–ಜಿಲ್ಲೆ, ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ72 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಪತ್ರ ಸಂಖ್ಯೆ: ಸನಿ31/ಸ್ಥಗಿತ/ ಎಂಪಿಸಿಎಸ್.ಚಿಕ್ಕಕುರುಬರಹಳ್ಳಿ/ಸಿಆರ್–04/2013–14 ದಿನಾಂಕ:15–10–2013 ಮತ್ತು ದಿನಾಂಕ: 06–11–2013.

2. ಈ ಕಚೇರಿ ನೋಟೀಸ್ ಸಂ:ಡಿಆರ್/ಡಿವಿಜಿ/ಸಮಾಪನೆ/ಸಿಆರ್–06/2013–14 ದಿನಾಂಕ:21–10–2013.

**ಪ್ರಸ್ತಾವನೆ :–** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರು ಉಲ್ಲೇಖ(1)ರಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿ ಹೊಂದಿದ್ದು, ಇದರ ಕಾರ್ಯಚಟುವಟಿಕೆಗಳು ಕಳೆದ 03–04ವರ್ಷಗಳಿಂದ ಸ್ಥಗಿತಗೊಂಡಿರುತ್ತವೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಸಮಿತಿ ಸಭೆ ನಡೆಸಿರುವುದಿಲ್ಲ, ಸಂಘದ ಲೆಕ್ಕಪರಿಶೋಧನೆಯಾಗಿರುವುದಿಲ್ಲ, ಹಾಗೂ ಬೈಲಾ ರೀತ್ಯಾ ಕಾರ್ಯನಿರ್ವಹಿಸುತ್ತಿಲ್ಲ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಡಳಿತ ಸಮಿತಿ ಸದಸ್ಯರು ಆಸಕ್ತಿ ಹೊಂದಿರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ಈ ಕಚೇರಿಯಿಂದ ಸಂಘದ ಪದಾಧಿಕಾರಿಗಳಿಗೆ ನೀಡಿದ ಕಾರಣ ಕೇಳಿ ತಿಳುವಳಿಗೆ ತಹಲ್ ವರೆಗೂ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ, ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ, ಕಾರಣ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–06/2013–14 ದಿನಾಂಕ: 19–11–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ:139:ಸಿಎಲ್ಎಂ:2010. ದಿನಾಂಕ:17–02–2011 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಎಸ್.ಎಚ್. ಬೆಲ್ಲದ್, ಆದ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ, ಚಿಕ್ಕಕುರುಬರಹಳ್ಳಿ, ಚನ್ನಗಿರಿ–ತಾ: ದಾವಣಗೆರೆ–ಜಿಲ್ಲೆ, ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ನೇ ಕಲಂ 73(1)ರನ್ವಯ **ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ,** ಇವರನ್ನು ಸಂಘದ ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು ಸಂಘದ ಪ್ರಭಾರವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73ರ ಪ್ರಕಾರ ಪಡೆದುಕೊಳ್ಳತಕ್ಕದ್ದು. ಹಾಗೂ ಸಂಘದ ಆಸ್ತಿ–ಜವಾಬ್ದಾರಿಗಳ ವಿಲೇವಾರಿಗಾಗಿ ಆದ್ಯತಾಪಟ್ಟಿ ತಯಾರಿಸಿ, ಈ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಯ್ದೆ ಕಲಂ 74 ರನ್ವಯ ಸಮಾಪನಾ ಕಾರ್ಯ ನಿರ್ವಹಿಸಲು ಆದೇಶಿಸಿದೆ.

ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ:19–11–2013 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಎಸ್.ಎಚ್.ಬೆಲ್ಲದ್,**
ಸಹಕಾರ ಸಂಘಗಳ ಉಪ ನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ

**P.R. 2405**
**S.C: 10**

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ಜಿಲ್ಲಾಡಳಿತ ಭವನ, ಎರಡನೇ ಮಹಡಿ, ಕೊಠಡಿ ಸಂಖ್ಯೆ:52,53, ಕರೂರು ಕೈಗಾರಿಕಾ ಪ್ರದೇಶ, ಪಿ.ಬಿ.ರಸ್ತೆ, ದಾವಣಗೆರೆ, ಇವರ ಕಾರ್ಯಾಲಯ.**

**ವಿಷಯ:** ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ, ಮಾವಿನಕಟ್ಟೆ, ಚನ್ನಗಿರಿ–ತಾ:, ದಾವಣಗೆರೆ–ಜಿಲ್ಲೆ, ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ. ಇವರ ಪತ್ರ ಸಂಖ್ಯೆ: ಸನಿ31/ಸ್ಥಗಿತ/ಎಂಪಿಸಿಎಸ್.ಮಾವಿನಕಟ್ಟೆ/ಸಿಆರ್–10/2013–14 ದಿನಾಂಕ:25–09–2013 ಮತ್ತು ದಿನಾಂಕ:06–11–2013.

2) ಈ ಕಚೇರಿ ನೋಟೀಸ್ ಸಂ:ಡಿಆರ್/ಡಿವಿಜಿ/ಸಮಾಪನೆ/ಸಿಆರ್–12/2013–14 ದಿನಾಂಕ:21–10–2013.

**ಪ್ರಸ್ತಾವನೆ :–** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರು ಉಲ್ಲೇಖ(1)ರಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿ ಹೊಂದಿದ್ದು, ಇದರ ಕಾರ್ಯಚಟುವಟಿಕೆಗಳು ಕಳೆದ 03–04ವರ್ಷಗಳಿಂದ ಸ್ಥಗಿತಗೊಂಡಿರುತ್ತವೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಸಮಿತಿ ಸಭೆ ನಡೆಸಿರುವುದಿಲ್ಲ, ಸಂಘದ ಲೆಕ್ಕಪರಿಶೋಧನೆಯಾಗಿರುವುದಿಲ್ಲ, ಹಾಗೂ ಬೈಲಾ ರೀತ್ಯಾ ಕಾರ್ಯನಿರ್ವಹಿಸುತ್ತಿಲ್ಲ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಡಳಿತ ಸಮಿತಿ ಸದಸ್ಯರು ಆಸಕ್ತಿ ಹೊಂದಿರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ಈ ಕಚೇರಿಯಿಂದ ಸಂಘದ ಪದಾಧಿಕಾರಿಗಳಿಗೆ ನೀಡಿದ ಕಾರಣ ಕೇಳಿ ತಿಳುವಳಿಗೆ ತಹಲ್ ವರೆಗೂ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ, ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ, ಕಾರಣ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–12/2013–14 ದಿನಾಂಕ: 19–11–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ:139:ಸಿಎಲ್‌ಎಂ:2010. ದಿನಾಂಕ:17–02–2011 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಎಸ್.ಎಚ್. ಬೆಲ್ಲದ್, ಆದ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ, ಮಾವಿನಕಟ್ಟೆ, ಚನ್ನಗಿರಿ–ತಾ: ದಾವಣಗೆರೆ–ಜಿಲ್ಲೆ, ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ನೇ ಕಲಂ 73(1)ರನ್ವಯ **ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ,** ಇವರನ್ನು ಸಂಘದ ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು ಸಂಘದ ಪ್ರಭಾರವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73ರ ಪ್ರಕಾರ ಪಡೆದುಕೊಳ್ಳತಕ್ಕದ್ದು. ಹಾಗೂ ಸಂಘದ ಆಸ್ತಿ–ಜವಾಬ್ದಾರಿಗಳ ವಿಲೇವಾರಿಗಾಗಿ ಆದ್ಯತಾಪಟ್ಟಿ ತಯಾರಿಸಿ, ಈ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಯ್ದೆ ಕಲಂ 74 ರನ್ವಯ ಸಮಾಪನಾ ಕಾರ್ಯ ನಿರ್ವಹಿಸಲು ಆದೇಶಿಸಿದೆ.

ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ:19–11–2013 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಎಸ್.ಎಚ್.ಬೆಲ್ಲದ್,**
ಸಹಕಾರ ಸಂಘಗಳ ಉಪ ನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ

**P.R. 2410**
**S.C: 10**

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ಜಿಲ್ಲಾಡಳಿತ ಭವನ, ಎರಡನೇ ಮಹಡಿ, ಕೊಠಡಿ ಸಂಖ್ಯೆ:52,53, ಕರೂರು ಕೈಗಾರಿಕಾ ಪ್ರದೇಶ, ಪಿ.ಬಿ.ರಸ್ತೆ, ದಾವಣಗೆರೆ, ಇವರ ಕಾರ್ಯಾಲಯ.**

ವಿಷಯ: ಸ್ಥಗಿತಗೊಂಡಿರುವ **ಹಾಲು ಉತ್ಪಾದಕರ ಸಹಕಾರ ಸಂಘ ನಿ, ಸಂತೆಬೆನ್ನೂರು,** ಚನ್ನಗಿರಿ–ತಾ:, ದಾವಣಗೆರೆ–ಜಿಲ್ಲೆ, ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72ರನ್ವಯ ಸಮಾಪನೆಗೊಳಿಸುವ ಬಗ್ಗೆ.

ಉಲ್ಲೇಖ: 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ. ಇವರ ಪತ್ರ ಸಂಖ್ಯೆ:ಸನಿ31/ಸ್ಥಗಿತ/ಎಂಪಿಸಿಎಸ್.ಸಂತೆಬೆನ್ನೂರು/ಸಿಆರ್– /2013–14 ದಿನಾಂಕ:15–10–2013.

**ಪ್ರಸ್ತಾವನೆ :–** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರು ಉಲ್ಲೇಖ(1)ರಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿ ಹೊಂದಿದ್ದು, ಇದರ ಕಾರ್ಯಚಟುವಟಿಕೆಗಳು ಕಳೆದ 03–04ವರ್ಷಗಳಿಂದ ಸ್ಥಗಿತಗೊಂಡಿರುತ್ತವೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಸಮಿತಿ ಸಭೆ ನಡೆಸಿರುವುದಿಲ್ಲ, ಸಂಘದ ಲೆಕ್ಕಪರಿಶೋಧನೆಯಾಗಿರುವುದಿಲ್ಲ, ಹಾಗೂ ಬೈಲಾ ರೀತ್ಯಾ ಕಾರ್ಯನಿರ್ವಹಿಸುತ್ತಿಲ್ಲ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಡಳಿತ ಸಮಿತಿ ಸದಸ್ಯರು ಆಸಕ್ತಿ ಹೊಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ, ಕಾರಣ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–13/2013–14, ದಿನಾಂಕ;19–11–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ:139:ಸಿಎಲ್‌ಎಂ:2010. ದಿನಾಂಕ:17–02–2011 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಎಸ್.ಎಚ್. ಬೆಲ್ಲದ್, ಆದ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ **ಹಾಲು ಉತ್ಪಾದಕರ ಸಹಕಾರ ಸಂಘ ನಿ, ಸಂತೆಬೆನ್ನೂರು, ಚನ್ನಗಿರಿ–ತಾ: ದಾವಣಗೆರೆ–ಜಿಲ್ಲೆ,** ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ನೇ ಕಲಂ 73(1)ರನ್ವಯ **ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಅಭಿವೃದ್ಧಿ ಅಧಿಕಾರಿ ಕಚೇರಿ, ಚನ್ನಗಿರಿ,** ಇವರನ್ನು ಸಂಘದ ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು

ಸಂಘದ ಪ್ರಭಾರವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73ರ ಪ್ರಕಾರ ಪಡೆದುಕೊಳ್ಳತಕ್ಕದ್ದು. ಹಾಗೂ ಸಂಘದ ಆಸ್ತಿ–ಜವಾಬ್ದಾರಿಗಳ ವಿಲೇವಾರಿಗಾಗಿ ಆದ್ಯತಾಪಟ್ಟಿ ತಯಾರಿಸಿ, ಈ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಯ್ದೆ ಕಲಂ 74 ರನ್ವಯ ಸಮಾಪನಾ ಕಾರ್ಯ ನಿರ್ವಹಿಸಲು ಆದೇಶಿಸಿದೆ.

ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ:19–11–2013 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಎಸ್.ಎಚ್.ಬೆಲ್ಲದ್,**
ಸಹಕಾರ ಸಂಘಗಳ ಉಪ ನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ

**P.R. 2411**
**S.C: 10**

## ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ಜಿಲ್ಲಾಡಳಿತ ಭವನ, ಎರಡನೇ ಮಹಡಿ, ಕೊಠಡಿ ಸಂಖ್ಯೆ:52,53, ಕರೂರು ಕೈಗಾರಿಕಾ ಪ್ರದೇಶ, ಪಿ.ಬಿ.ರಸ್ತೆ, ದಾವಣಗೆರೆ, ಇವರ ಕಾರ್ಯಾಲಯ.

ವಿಷಯ: ಸ್ಥಗಿತಗೊಂಡಿರುವ **ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ, ದೊಡ್ಡಘಟ್ಟ,** ಚನ್ನಗಿರಿ–ತಾ:, ದಾವಣಗೆರೆ–ಜಿಲ್ಲೆ, ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ72ರನ್ವಯ ಸಮಾಪನೆಗೊಳಿಸುವ ಬಗ್ಗೆ.

ಉಲ್ಲೇಖ: 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ. ಇವರ ಪತ್ರ ಸಂಖ್ಯೆ:ಸನಿ31/ಸ್ಥಗಿತ/ಹ.ಉ.ಮ.ಸ.ಸಂ.ನಿ ದೊಡ್ಡಘಟ್ಟ,/ಸಿಆರ್– /2013–14 ದಿನಾಂಕ:15–10–2013.

**ಪ್ರಸ್ತಾವನೆ : –** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರು ಉಲ್ಲೇಖ(1)ರಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿ ಹೊಂದಿದ್ದು, ಇದರ ಕಾರ್ಯಚಟುವಟಿಕೆಗಳು ಕಳೆದ 03–04ವರ್ಷಗಳಿಂದ ಸ್ಥಗಿತಗೊಂಡಿರುತ್ತವೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಸಮಿತಿ ಸಭೆ ನಡೆಸಿರುವುದಿಲ್ಲ, ಸಂಘದ ಲೆಕ್ಕಪರಿಶೋಧನೆಯಾಗಿರುವುದಿಲ್ಲ, ಹಾಗೂ ಬೈಲಾ ರೀತ್ಯಾ ಕಾರ್ಯನಿರ್ವಹಿಸುತ್ತಿಲ್ಲ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಡಳಿತ ಸಮಿತಿ ಸದಸ್ಯರು ಆಸಕ್ತಿ ಹೊಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ, ಕಾರಣ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–14/2013–14, ದಿನಾಂಕ;19–11–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ:139:ಸಿಎಲ್‌ಎಂ:2010. ದಿನಾಂಕ:17–02–2011 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಎಸ್.ಎಚ್. ಬೆಲ್ಲದ್, ಆದ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ **ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ, ದೊಡ್ಡಘಟ್ಟ, ಚನ್ನಗಿರಿ–ತಾ: ದಾವಣಗೆರೆ–ಜಿಲ್ಲೆ,** ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ನೇ ಕಲಂ 73(1)ರನ್ವಯ **ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಅಭಿವೃದ್ಧಿ ಅಧಿಕಾರಿ ಕಚೇರಿ, ಚನ್ನಗಿರಿ,** ಇವರನ್ನು ಸಂಘದ ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು ಸಂಘದ ಪ್ರಭಾರವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73ರ ಪ್ರಕಾರ ಪಡೆದುಕೊಳ್ಳತಕ್ಕದ್ದು. ಹಾಗೂ ಸಂಘದ ಆಸ್ತಿ–ಜವಾಬ್ದಾರಿಗಳ ವಿಲೇವಾರಿಗಾಗಿ ಆದ್ಯತಾಪಟ್ಟಿ ತಯಾರಿಸಿ, ಈ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಯ್ದೆ ಕಲಂ 74 ರನ್ವಯ ಸಮಾಪನಾ ಕಾರ್ಯ ನಿರ್ವಹಿಸಲು ಆದೇಶಿಸಿದೆ.

ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ:19–11–2013 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಎಸ್.ಎಚ್.ಬೆಲ್ಲದ್,**
ಸಹಕಾರ ಸಂಘಗಳ ಉಪ ನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ

**P.R. 2412**
**S.C: 10**

## ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ಜಿಲ್ಲಾಡಳಿತ ಭವನ, ಎರಡನೇ ಮಹಡಿ, ಕೊಠಡಿ ಸಂಖ್ಯೆ:52,53, ಕರೂರು ಕೈಗಾರಿಕಾ ಪ್ರದೇಶ, ಪಿ.ಬಿ.ರಸ್ತೆ, ದಾವಣಗೆರೆ, ಇವರ ಕಾರ್ಯಾಲಯ.

**ವಿಷಯ:** ಸ್ಥಗಿತಗೊಂಡಿರುವ **ಹಾಲು ಉತ್ಪಾದಕರ ಸಹಕಾರ ಸಂಘ ನಿ, ಸಾಸಿವೆಹಳ್ಳಿ, ಹರಪನಹಳ್ಳಿ–ತಾ:,** ದಾವಣಗೆರೆ–ಜಿಲ್ಲೆ, ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ, ಇವರ ಪತ್ರ ಸಂಖ್ಯೆ:ಸನಿ/ಹೆಚ್.ಆರ್.ಪಿ/ ಸಮಾಪನೆ/ಸಿಆರ್– /2013–14 ದಿನಾಂಕ: 28–10–2013.

**ಪ್ರಸ್ತಾವನೆ : –** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರು ಉಲ್ಲೇಖ(1)ರಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿ ಹೊಂದಿದ್ದು, ಇದರ ಕಾರ್ಯಚಟುವಟಿಕೆಗಳು ಕಳೆದ 08–10ವರ್ಷಗಳಿಂದ ಸ್ಥಗಿತಗೊಂಡಿರುತ್ತವೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಸಮಿತಿ ಸಭೆ ನಡೆಸಿರುವುದಿಲ್ಲ, ಹಾಗೂ ಬೈಲಾ ರೀತ್ಯಾ ಕಾರ್ಯನಿರ್ವಹಿಸುತ್ತಿಲ್ಲ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಡಳಿತ ಸಮಿತಿ ಸದಸ್ಯರು ಆಸಕ್ತಿ ಹೊಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ, ಕಾರಣ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–15/2013–14, ದಿನಾಂಕ:19–11–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ:139:ಸಿಎಲ್‌ಎಂ:2010. ದಿನಾಂಕ:17–02–2011 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಎಸ್.ಎಚ್. ಬೆಲ್ಲದ್, ಆದ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ **ಹಾಲು ಉತ್ಪಾದಕರ ಸಹಕಾರ ಸಂಘ ನಿ, ಸಾಸಿವೆಹಳ್ಳಿ, ಹರಪನಹಳ್ಳಿ–ತಾ: ದಾವಣಗೆರೆ–ಜಿಲ್ಲೆ,** ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ನೇ ಕಲಂ 73(1)ರನ್ವಯ **ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಹರಪನಹಳ್ಳಿ,** ಇವರನ್ನು ಸಂಘದ ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು ಸಂಘದ ಪ್ರಭಾರವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73ರ ಪ್ರಕಾರ ಪಡೆದುಕೊಳ್ಳತಕ್ಕದ್ದು. ಹಾಗೂ ಸಂಘದ ಆಸ್ತಿ–ಜವಾಬ್ದಾರಿಗಳ ವಿಲೇವಾರಿಗಾಗಿ ಆದ್ಯತಾಪಟ್ಟಿ ತಯಾರಿಸಿ, ಈ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಯ್ದೆ ಕಲಂ 74 ರನ್ವಯ ಸಮಾಪನಾ ಕಾರ್ಯ ನಿರ್ವಹಿಸಲು ಆದೇಶಿಸಿದೆ.

ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ: 19–11–2013 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಎಸ್.ಎಚ್.ಬೆಲ್ಲದ್,**
ಸಹಕಾರ ಸಂಘಗಳ ಉಪ ನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ

P.R. 2413
S.C: 10

**ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ನಂ. 1, ಅಲಿ ಆಸ್ಕರ್ ರಸ್ತೆ, ಬೆಂಗಳೂರು–52 ಇವರ ನ್ಯಾಯಾಲಯದಲ್ಲಿ**

**ದಾವೆ ಸಂಖ್ಯೆ: ಆರ್‌ಸಿಎಸ್/ಡಿಐಎಸ್/ಡಿ1/ಸೌ/5/2013–14**

| ವಾದಿ | ವಿರುದ್ಧ | ಪ್ರತಿವಾದಿಗಳು |
|---|---|---|
| ಸ್ವಾಭಿಮಾನಿ ಸೌಹಾರ್ದ ಪತ್ತಿನ ಸಹಕಾರಿ ನಿಯಮಿತ,<br>ನಂ. 125, ಡಯಾಗನಲ್ ರಸ್ತೆ,<br>ವಿ.ವಿ. ಪುರಂ, ಬೆಂಗಳೂರು–04<br>ಇದರ ಮುಖ್ಯ ಕಾರ್ಯನಿರ್ವಹಣಾಧಿಕಾರಿ | | 1. ಜಿ.ಆರ್. ಪ್ರಕಾಶ್ ಬಿನ್ ಲೇಟ್ ರಾಮಯ್ಯ, 46 ವರ್ಷ<br>ನಂ. 36, ಹೊಸ ಸಂಖ್ಯೆ : 529, ಬಿ.ಜಿ. ರಸ್ತೆ, ಗೊಟ್ಟಿಗೆರೆ,<br>ಬೆಂಗಳೂರು–83<br>2. ಹೆಚ್.ಎಸ್. ಶ್ರೀನಿವಾಸ್ ಬಿನ್ ಲೇಟ್ ಹೆಚ್.ವಿ. ಸುಬ್ಬಯ್ಯ, 47<br>ವರ್ಷ, ನಂ. 90190, ಗುಂಡಪ್ಪ ನಿಲಯ, ಕೆಂಬತ್ತಹಳ್ಳಿ ರಸ್ತೆ,<br>ಬಿ.ಜಿ. ರೋಡ್, ಗೊಟ್ಟಿಗೆರೆ, ಬೆಂಗಳೂರು–83<br>3. ಪಿ. ನಾಗೇಶ್‌ಬಾಬು ಬಿನ್ ಕೃಷ್ಣರೆಡ್ಡಿ, 46 ವರ್ಷ<br>ನಂ. 28/29, 2ನೇ ಕ್ರಾಸ್, ಸ್ಮೃತಿ ಬಡಾವಣೆ, ಬಸವನಪುರ,<br>ಬಿ.ಜಿ. ರೋಡ್, ಬೆಂಗಳೂರು–83 |

**ಸೌಹಾರ್ದ ಸಹಕಾರಿ ಕಾಯ್ದೆ 1997ರ ಕಲಂ 44ರಡಿ ಷರತ್ತಿಗೊಳಪಟ್ಟ ತೀರ್ಪು ಪೂರ್ವ ಜಪ್ತಿ ಆದೇಶದ ನೋಟೀಸು**

ವಾದಿಯು ಈ ದಾವೆಯನ್ನು ಪ್ರತಿವಾದಿಗಳ ವಿರುದ್ಧ ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ 1997ರ ಕಲಂ 39ರ ಮೇರೆಗೆ ದಾಖಲಿಸಿ ಪ್ರತಿವಾದಿಗಳಿಂದ ವಾದಿಗೆ ಪಾವತಿಯಾಗಲು ಬಾಕಿ ಇರುವ ಸಾಲ ಮತ್ತು ಬಡ್ಡಿ ಹಣ ರೂ. 3,96,609.00ಗಳನ್ನು ಶೇ. 13ರ ಬಡ್ಡಿಯೊಂದಿಗೆ ವಸೂಲಿ ಮಾಡಲು ಡಿಕ್ರಿ ನೀಡಲು ಕೋರಿರುತ್ತಾರೆ. ಕಲಂ 44 ಹಾಗೂ ಕಲಂ 40(3) ರಡಿ ಅರ್ಜಿ ಸಲ್ಲಿಸಿ 1ನೇ ಪ್ರತಿವಾದಿಯ ಷೆಡ್ಯೂಲ್ ಸ್ವತ್ತನ್ನು ತೀರ್ಪುಪೂರ್ವ ಜಪ್ತಿಗೊಳಪಡಿಸಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಈ ದಿನ ವಾದಿ ಪರ ಶ್ರೀ ಎಸ್.ಎಂ. ಶ್ರೀರಾಮರೆಡ್ಡಿ, ವಕೀಲರು ಹಾಜರಾಗಿ ವಕಾಲತ್ತು ಸಲ್ಲಿಸಿರುತ್ತಾರೆ ಹಾಗೂ ಕಲಂ 44ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿರುವ ಅರ್ಜಿಯ ಬಗ್ಗೆ ವಾದ ಮಂಡಿಸಿರುತ್ತಾರೆ. ಅದನ್ನು ಆಲಿಸಲಾಗಿದೆ.

ವಾದಿಯು ಸೌಹಾರ್ದ ಸಹಕಾರಿ ಕಾಯ್ದೆ 1997ರ ಕಲಂ 39ರಡಿ ಸಲ್ಲಿಸಿರುವ ದಾವೆ ಅರ್ಜಿ, ಕಲಂ 44ರಡಿ ಸಲ್ಲಿಸಿರುವ ಅರ್ಜಿ ಹಾಗೂ ಅವರ ಪರ ವಕೀಲರು ಮಂಡಿಸಿರುವ ವಾದದಲ್ಲಿ 1ನೇ ಪ್ರತಿವಾದಿ, ವಾದಿ ಸಂಸ್ಥೆಯ ಸದಸ್ಯರಾಗಿದ್ದು, ಮಾರುತಿ ರಿಟ್ಜ್ ವಿಡಿಐ ಮಾಡಲ್ ವಾಹನವನ್ನು ರೂ. 556581/–ಕ್ಕೆ ಖರೀದಿಸಲು ಸಾಲಕ್ಕಾಗಿ ಅರ್ಜಿ ಸಲ್ಲಿಸಿದ್ದು, ಅವರಿಗೆ ರೂ. 4.70 ಲಕ್ಷ ಸಾಲ ಮಂಜೂರು ಮಾಡಿ ದಿನಾಂಕ: 19–10–2011ರಂದು ಮೆ॥ ಸಾಗರ ಆಟೋಮೊಬೈಲ್ಸ್, ಬೆಂಗಳೂರು ಇವರಿಗೆ ಚೆಕ್ ನೀಡಿದ್ದು, ಈ ಸಾಲಕ್ಕೆ 2 ಹಾಗೂ 3ನೇ ಪ್ರತಿವಾದಿಗಳು ಜಾಮೀನುದಾರರೆಂದು ಹೇಳಿರುತ್ತಾರೆ. ಈ ಸಾಲವನ್ನು ರೂ. 10694/–ಗಳ ಮಾಸಿಕ ಕಂತುಗಳಲ್ಲಿ ಮರುಪಾವತಿಸಬೇಕಾಗಿದ್ದು, 1ನೇ ಪ್ರತಿವಾದಿಯು ಈ ಸಾಲವನ್ನು ಮರುಪಾವತಿ ಮಾಡದೇ ಸುಸ್ತಿದಾರರಾಗಿದ್ದಾರೆಂದು ಅವರಿಗೆ ಈ ಬಗ್ಗೆ ನೋಟೀಸು ನೀಡಿದರೂ ಹಣ ಪಾವತಿಸಿಲ್ಲವೆಂದು ಹೇಳಿರುತ್ತಾರೆ. ಸುಸ್ತಿದಾರರಾಗಿದ್ದಾರೆಂದು ಹೇಳಿರುತ್ತಾರೆ. ವಾಹನಕ್ಕೆ ವಿಮೆ ಮಾಡಿಸಿರುವ ಬಗ್ಗೆ ಪರಿಶೀಲಿಸಲು ವಾಹನವನ್ನು ಹಾಜರುಪಡಿಸಲು ಕೋರಿದರೂ ವಾಹನವನ್ನು ಹಾಜರುಪಡಿಸಿಲ್ಲವೆಂದೂ, ಇದರಿಂದಾಗಿ 1ನೇ ಪ್ರತಿವಾದಿಯ ಷೆಡ್ಯೂಲ್ ಸ್ವತ್ತನ್ನು ವಿಲೇ ಮಾಡುವ ಉದ್ದೇಶ ಹೊಂದಿದ್ದು, ವಿಲೇ ಮಾಡಿದಲ್ಲಿ ಈ ದಾವೆಯನ್ನು ಮುಂದೆ ಆದೇಶ ಹೊರಡಿಸಿದರೂ ಅದನ್ನು ಜಾರಿ ಮಾಡಿ ಹಣ ವಸೂಲಿ ಮಾಡಿಕೊಳ್ಳಲು ತೊಂದರೆಯಾಗುವುದರಿಂದ ಅದನ್ನು ವಿಲೇ ಮಾಡದಂತೆ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ವಾದಿಯ ದಾವಾ ಅರ್ಜಿ ವಾದಿಯು ಸೌಹಾರ್ದ ಸಹಕಾರಿ ಕಾಯ್ದೆ 1997ರ ಕಲಂ 44ರಡಿ ಸಲ್ಲಿಸಿರುವ ಅರ್ಜಿ ಹಾಗೂ ಹಾಜರುಪಡಿಸಿರುವ ದಾಖಲೆಗಳು ಹಾಗೂ ಅವರ ಪರ ವಕೀಲರು ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿ ಮಂಡಿಸಿದ ವಾದ ಇತ್ಯಾದಿಗಳನ್ನು ಪರಿಶೀಲಿಸಿದೆ. ಅರ್ಜಿದಾರರ ಅರ್ಜಿ ಪರಿಗಣಿಸಿ, ಷೆಡ್ಯೂಲ್ ಸ್ವತ್ತನ್ನು 1ನೇ ಪ್ರತಿವಾದಿಯು ವಿಲೇ ಮಾಡಿದಲ್ಲಿ ಪ್ರತಿವಾದಿಯ ವಿರುದ್ಧ ದಾವೆಯಲ್ಲಿ ಡಿಕ್ರಿ ನೀಡಿದರೂ ಅದನ್ನು ಜಾರಿ ಮಾಡಲು ಸಾಧ್ಯವಿಲ್ಲದಂತಾಗುವುದೆಂಬ ವಾದಿಯ ಕೋರಿಕೆ ಪರಿಗಣಿಸಿ, ಈ ಕೆಳಕಂಡಂತೆ ಷೆಡ್ಯೂಲ್ಡ್ ಸ್ವತ್ತನ್ನು ಷರತ್ತಿಗೊಳಪಟ್ಟು ತೀರ್ಪು ಪೂರ್ವ

ಜಪ್ತಿ ಮಾಡಿ ಆದೇಶಿಸಿದೆ. ಪ್ರತಿವಾದಿಯು ಈ ಆದೇಶವನ್ನು ತೆರವುಗೊಳಿಸಲು ಇಚ್ಛಿಸಿದಲ್ಲಿ ರೂ. 3.96 ಲಕ್ಷಗಳ ಠೇವಣಿ ಹಣವನ್ನು ಭದ್ರತೆಯಾಗಿ ಈ ನೋಟೀಸು ಪಡೆದ 30 ದಿನಗಳೊಳಗಾಗಿ ನೀಡತಕ್ಕದ್ದು. ತಪ್ಪಿದಲ್ಲಿ ಈ ಆದೇಶವನ್ನು ಸ್ಥಿರೀಕರಿಸಲಾಗುವುದೆಂದು ತಿಳಿಯುವುದು.

**ಷೆಡ್ಯೂಲ್ ಸ್ವತ್ತು :**

1. ನೋಂದಣಿ ಸಂಖ್ಯೆ ಕೆಎ 51 ಎಂಬಿ 9295ರ ಸಂಖ್ಯೆಯ ಮಾರುತಿ ರಿಟ್ಜ್ ಕಾರು
2. ಒಂದು ರೆಫ್ರಿಜಿರೇಟರ್
3. ಒಂದು ವಾಷಿಂಗ್ ಮೆಷಿನ್

ಸಂಖ್ಯೆ 2 ರಿಂದ 9 ಇವು 1ನೇ ಪ್ರತಿವಾದಿಯ ಬನ್ನೇರುಘಟ್ಟ ರಸ್ತೆ ಗೊಟ್ಟಿಗೆರೆಯಲ್ಲಿನ ನಿವಾಸದಲ್ಲಿರುತ್ತವೆ.

ಈ ಆದೇಶವನ್ನು ಈ ದಿನ ದಿನಾಂಕ: 12–07–2013ರಂದು ಮುಕ್ತ ನ್ಯಾಯಾಲಯದಲ್ಲಿ ಉಚ್ಚರಿಸಿದೆ.

.................................................,

**ಸಹಕಾರ ಸಂಘಗಳ ನಿಬಂಧಕರು,**
**ಕರ್ನಾಟಕ ರಾಜ್ಯ, ಬೆಂಗಳೂರು**

PR 2346

## ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ಜಿಲ್ಲಾ ಕಛೇರಿಗಳ ಸಂಕೀರ್ಣ, ಎರಡನೇ ಮಹಡಿ, ಕೊಠಡಿ ಸಂಖ್ಯೆ: 52–53, ಕರೂರು ಕೈಗಾರಿಕಾ ಪ್ರದೇಶ, ಪಿ.ಬಿ. ರಸ್ತೆ, ದಾವಣಗೆರೆ, ಇವರ ಕಾರ್ಯಾಲಯ

**ವಿಷಯ :–** ಸಮಾಪನೆಗೊಂಡಿರುವ ಚಿಕ್ಕವ್ವನಾಗ್ತಿಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಚಿಕ್ಕವ್ವನಾಗ್ತಿಹಳ್ಳಿ, ದಾವಣಗೆರೆ ಜಿಲ್ಲೆ, ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು

**ಉಲ್ಲೇಖ :–**
1. ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ : ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–07/2012–13, ದಿನಾಂಕ: 28–12–2012
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಪತ್ರ ಸಂಖ್ಯೆ: ಸನಿ31/ಸಮಾಪನೆ/ಚಿ.ಹಾ.ಉ.ಮ.ಸ.ಸಂ.ನಿ./ಸಿಆರ್–/2013–14, ದಿನಾಂಕ: 27–09–2013

**ಪ್ರಸ್ತಾವನೆ :**

ಹಾಲು ಉತ್ಪಾದಕರ ಸಹಕಾರ ಸಂಘ ನಿ., ಚಿಕ್ಕವ್ವನಾಗ್ತಿಹಳ್ಳಿ, ದಾವಣಗೆರೆ ಜಿಲ್ಲೆ, ಈ ಸಹಕಾರ ಸಂಘವು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರನ್ವಯ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಪರಿಗಣಿಸಿ, ಉಲ್ಲೇಖ (1)ರಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ, ಇವರು ದಿನಾಂಕ: 28–12–2012ರಲ್ಲಿ ಸಮಾಪನೆಗೊಳಿಸಿ ಶ್ರೀ ಆರ್. ರಮೇಶ್, ಪ್ರ.ದ.ಸ., ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ದಾವಣಗೆರೆ ಇವರನ್ನು ಸಮಾಪಕರನ್ನಾಗಿ ನೇಮಿಸಲಾಗಿದೆ. ಸದರಿ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಮಟ್ಟದ್ದಾಗಿರುತ್ತದೆ. ಸಮಾಪಕರು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಆಢಾವೆ ಪತ್ರಿಕೆಯನ್ನು ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮೂಲಕ ಪ್ರಸ್ತಾವೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರು ದಿನಾಂಕ: 27–09–2013ರ ಪತ್ರದಲ್ಲಿ ಸಂಘದ ನೋಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

### ಆದೇಶ

### ಸಂಖ್ಯೆ : ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–07/2012–13, ದಿನಾಂಕ: 30–09–2013

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಓ/139/ಸಿಎಲ್‌ಎಂ/2010, ದಿನಾಂಕ: 17–02–2011ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಎಸ್.ಹೆಚ್. ಬೆಲ್ಲದ್, ಆದ ನಾನು ಸಮಾಪನೆಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಚಿಕ್ಕವ್ವನಾಗ್ತಿಹಳ್ಳಿ, ದಾವಣಗೆರೆ ಜಿಲ್ಲೆ, ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ. ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು ಹಾಗೂ ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು. ಕರ್ನಾಟಕ ಸಹಕಾರ ಸಂಘಗಳ ನಿಯಮಗಳು, 1960ರ ನಿಯಮ 33(ಎನ್)ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ಈ ಆದೇಶವನ್ನು ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ಅಂದರೆ ದಿನಾಂಕ: 30–09–2013ರಂದು ಹೊರಡಿಲಾಗಿದೆ.

**ಎಸ್.ಹೆಚ್. ಬೆಲ್ಲದ್,**
**ಸಹಕಾರ ಸಂಘಗಳ ಉಪ ನಿಬಂಧಕರು,**
**ದಾವಣಗೆರೆ ಜಿಲ್ಲೆ, ದಾವಣಗೆರೆ**

P.R. 2347
SC - 10

## ಶಿಕ್ಷಣ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಇಡಿ 116 ಡಿಪಿಐ 2011, ಬೆಂಗಳೂರು, ದಿನಾಂಕ: 17ನೇ ಜುಲೈ, 2013**

**ವಿಷಯ :–** ಸಾರ್ವಜನಿಕ ಶಿಕ್ಷಣ ಇಲಾಖೆಯ ಹಿರಿಯ ಸಹಾಯಕ ನಿರ್ದೇಶಕರು (ವಾಣಿಜ್ಯ) ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 01–01–2011ರಲ್ಲಿದ್ದಂತೆ ಪ್ರಕಟಿಸುವ ಕುರಿತು

ಸಾರ್ವಜನಿಕ ಶಿಕ್ಷಣ ಇಲಾಖೆಯ ಹಿರಿಯ ಸಹಾಯಕ ನಿರ್ದೇಶಕರು (ವಾಣಿಜ್ಯ) ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 01–01–2011ರಲ್ಲಿರುವಂತೆ ತಯಾರಿಸಿ, ಲಗತ್ತಿಸಿರುವ ಅನುಬಂಧದಲ್ಲಿ ಪ್ರಕಟಿಸಲಾಗಿದೆ.

ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ ಇದರಿಂದ ಬಾಧಿತರಾಗಬಹುದಾದಂತಹ, ಅಧಿಕಾರಿಗಳು ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ/ಸಲಹೆ/ಸೂಚನೆಗಳಿದ್ದಲ್ಲಿ, ಅದನ್ನು ಸಮರ್ಥಿಸುವಂತಹ ದಾಖಲೆಗಳೊಂದಿಗೆ, ಬೆಂಗಳೂರಿನ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರಿಗೆ ಸಲ್ಲಿಸಿ, ಅದರ ಪ್ರತಿಯನ್ನು ಸರ್ಕಾರದ ಕಾರ್ಯದರ್ಶಿ, ಶಿಕ್ಷಣ ಇಲಾಖೆ, (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ), ಕರ್ನಾಟಕ ಸರ್ಕಾರದ ಸಚಿವಾಲಯ, 6ನೇ ಮಹಡಿ, ಬಹುಮಹಡಿಗಳ ಕಟ್ಟಡ, ಬೆಂಗಳೂರು, ಇವರಿಗೆ ಸಲ್ಲಿಸುವುದು. ಈ ನಿಗಧಿತ ಅವಧಿ ಮುಗಿದ ನಂತರ ಬಂದ ಆಕ್ಷೇಪಣೆಗಳು/ಸಲಹೆಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಪಟಗಾರ್,**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಶಿಕ್ಷಣ ಇಲಾಖೆ (ಆಡಳಿತ).

## ಅನುಬಂಧ

**ಸಾರ್ವಜನಿಕ ಶಿಕ್ಷಣ ಇಲಾಖೆಯ ಹಿರಿಯ ಸಹಾಯಕ ನಿರ್ದೇಶಕರು (ವಾಣಿಜ್ಯ) ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 01–01–2011ರಲ್ಲಿದ್ದಂತೆ**

| ಕ್ರಮ ಸಂಖ್ಯೆ | ಸಹಾಯಕ ನಿರ್ದೇಶಕರ ವೃಂದದ ಜೇಷ್ಠತೆ | ಅಧಿಕಾರಿಗಳ ಹೆಸರು ಶ್ರೀಮತಿ/ಶ್ರೀ | ಜನ್ಮ ದಿನಾಂಕ | ಸ್ಥಾನಪನ್ನ ಬಡ್ತಿ ನೀಡಿದ ದಿನಾಂಕ | ಪ.ಜಾತಿ/ ಪ.ಪಂಗಡ ಸಾಮಾನ್ಯ | ಷರಾ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | 1 | ಎಸ್.ಎಸ್. ಚಂದ್ರಶೇಖರ ವಿದ್ಯಾಸಾಗರ್ | 12–10–1939 | 09–09–1997 | ಸಾಮಾನ್ಯ | ನಿವೃತ್ತಿ |
| 2 | 2 | ಜಿ.ವಿ. ಹನುಮಯ್ಯ | 16–02–1953 | 13–11–2009 | ಪ.ಜಾತಿ | |

**ಎಸ್.ಬಿ. ಪಟಗಾರ್,**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಶಿಕ್ಷಣ ಇಲಾಖೆ (ಆಡಳಿತ).

**P.R. 2371**

**SC 100**

## ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು–ಇವರ ನಡವಳಿಗಳು

**ವಿಷಯ :–** ಶ್ರೀ ವೇಣುಗೋಪಾಲ, ಅಡುಗೆ ಸಹಾಯಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ವಾಮದಪದವು, ಬಂಟ್ವಾಳ ನಿಯೋಜನೆ ಮೇರೆಗೆ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿನಿಲಯ, ವಾಮದಪದವು, ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ–ಇವರನ್ನು ಸೇವೆಯಿಂದ ವಜಾ ಮಾಡುವ ಕುರಿತು ಅಂತಿಮ ಆದೇಶ

**ಉಲ್ಲೇಖ :–**

1. ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ತಾಲೂಕು ಪಂಚಾಯತ್, ಬಂಟ್ವಾಳ–ಇವರ ಕಛೇರಿ ಕಾರಣ ಕೇಳಿಕೆ ನೋಟಿಸು ಸಂಖ್ಯೆ: ತಾಪಬಂ/ಬಿಸಿಎಂ./ಸಿಬ್ಬಂದಿ/ಸಿಆರ್–14/12–13, ದಿನಾಂಕ:22–06–2012, ದಿನಾಂಕ: 31–08–2012 ಮತ್ತು ದಿನಾಂಕ: 27–11–2012
2. ಪತ್ರಿಕಾ ಪ್ರಕಟಣೆ, ಉದಯವಾಣಿ ಕನ್ನಡ ದೈನಿಕದಲ್ಲಿ ಪ್ರಕಟಣೆ, ದಿನಾಂಕ: 27–12–2012
3. ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ತಾಲೂಕು ಪಂಚಾಯತ್, ಬಂಟ್ವಾಳ–ಇವರ ವರದಿ ದಿನಾಂಕ: 31–12–2012
4. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು–ಇವರ ಕಛೇರಿ ತಿಳುವಳಿಕೆ ಪತ್ರ ಸಂಖ್ಯೆ: ಬಿಸಿಎಂ/ವಿನಿ/ಸಿಬ್ಬಂದಿ/ಸಿಆರ್–14/07–08, ದಿನಾಂಕ: 05–01–2013
5. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು–ಇವರ ಕಛೇರಿ ತಿಳುವಳಿಕೆ ಪತ್ರ ಸಂಖ್ಯೆ: ಬಿಸಿಎಂ/ವಿನಿ/ಸಿಬ್ಬಂದಿ/ಸಿಆರ್–14/07–08, ದಿನಾಂಕ: 14–03–2013
6. ತಾಲೂಕು ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ತಾಲೂಕು ಪಂಚಾಯತ್, ಬಂಟ್ವಾಳ–ಇವರ ವರದಿ ದಿನಾಂಕ: 02–04–2013

**ಪ್ರಸ್ತಾವನೆ :**

ಶ್ರೀ ವೇಣುಗೋಪಾಲ, ಅಡುಗೆ ಸಹಾಯಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ವಾಮದಪದವು, ಬಂಟ್ವಾಳ ನಿಯೋಜನೆ ಮೇರೆಗೆ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿ ನಿಲಯ, ವಾಮದಪದವು, ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ–ಇವರು ದಿನಾಂಕ: 01–05–2012ರಿಂದ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿ ನಿಲಯ, ವಾಮದಪದವು, ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ–ಇಲ್ಲಿನ ಅಡುಗೆ ಸಹಾಯಕರ ಹುದ್ದೆಯ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿದ್ದು, ಇವರ ಅನಧಿಕೃತ ಗೈರು ಹಾಜರಿ ಕುರಿತು, ಉಲ್ಲೇಖ (1)ರಲ್ಲಿ, ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ತಾಲೂಕು ಪಂಚಾಯತ್, ಬಂಟ್ವಾಳ–ಇವರ ಕಛೇರಿಯಿಂದ ದಿನಾಂಕ: 22–06–2012, ದಿನಾಂಕ: 31–08–2012 ಮತ್ತು ದಿನಾಂಕ: 27–11–2012ರಂದು ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿ ಸತತವಾಗಿ ಕಾರಣ ಕೇಳಿಕೆ ನೋಟಿಸುಗಳನ್ನು ನೌಕರರಿಗೆ ನೋಂದಾಯಿತ ಅಂಚೆ ಮುಖಾಂತರ ಜ್ಯಾರಿಗೊಳಿಸಲಾಗಿರುತ್ತದೆ. ನೌಕರರು ಸದರಿ ಅಂಚೆಯನ್ನು ಸ್ವೀಕರಿಸಿ ಸ್ವೀಕೃತಿಯನ್ನು ನೀಡಿರುತ್ತಾರೆ. ಆದರೆ, ಇವರು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಈ ಹಿನ್ನೆಲೆಯಲ್ಲಿ, ಉಲ್ಲೇಖ (2)ರಲ್ಲಿ ಪತ್ರಿಕಾ ಪ್ರಕಟಣೆಯನ್ನು ಹೊರಡಿಸುವ ಮೂಲಕ ಕೂಡಲೇ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಲಾಯಿತು. ಈ ಪತ್ರಿಕಾ ಪ್ರಕಟಣೆಯು ದಿನಾಂಕ: 27–12–2012ರಂದು ಉದಯವಾಣಿ ಕನ್ನಡ ದೈನಿಕದಲ್ಲಿ ಪ್ರಕಟಗೊಂಡಿರುತ್ತದೆ. ತದನಂತರವೂ ಈ ನೌಕರರು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ಕಾರಣ ಕೇಳಿಕೆ ನೋಟೀಸುಗಳು/ ಈ ನೌಕರರ ಗೈರು ಹಾಜರಿಗೆ ಸಂಬಂಧಿಸಿದಂತೆ, ಈ ನೌಕರರು ಕಾರ್ಯನಿರ್ವಹಿಸುತ್ತಿದ್ದ ನಿಲಯದ ಹಾಜರಿ ಪುಸ್ತಕದ ಸಂಬಂಧಿಸಿದ ಪುಟಗಳ ದೃಢೀಕೃತ ಪ್ರತಿ/ಪತ್ರಿಕಾ ಪ್ರಕಟಣೆಯ ಪ್ರತಿಗಳೊಂದಿಗೆ ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ತಾಲೂಕು ಪಂಚಾಯತ್, ಬಂಟ್ವಾಳ ಇವರು ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು–ಇವರಿಗೆ ಉಲ್ಲೇಖ (3)ರಲ್ಲಿ ವರದಿಯನ್ನು ಕಳುಹಿಸಿಕೊಡುತ್ತಾ, ಈ ನೌಕರರು ದಿನಾಂಕ: 01–05–2012ರಿಂದ ನಿಲಯದ ಕರ್ತವ್ಯಕ್ಕೆ ನಿರಂತರವಾಗಿ ಅನಧಿಕೃತ ಗೈರುಹಾಜರಾಗಿದ್ದು, ಇವರು ಈ ಅವಧಿಗೆ ರಜಾ ಮಂಜೂರಾತಿ ಕೋರಿ ಯಾವುದೇ ರಜಾ ಅರ್ಜಿಯನ್ನು ಸಲ್ಲಿಸಿರುವುದಿಲ್ಲವೆಂದೂ ಈ ಅವಧಿಗೆ ಈ ನೌಕರರಿಗೆ ವೇತನವನ್ನು ಪಾವತಿಸಿರುವುದಿಲ್ಲವೆಂದೂ ಮತ್ತು ಇವರ ಅನಧಿಕೃತ ಗೈರುಹಾಜರಿಯಿಂದಾಗಿ ನಿಲಯ ನಿರ್ವಹಣೆಗೆ ತೀರಾ ತೊಂದರೆ ಉಂಟಾಗಿರುತ್ತದೆ ಎಂದೂ ತಿಳಿಸುತ್ತಾ ಇವರ ವಿರುದ್ಧ ನಿಯಮಾನುಸಾರ ಶಿಸ್ತುಕ್ರಮ ಜರುಗಿಸುವಂತೆ ಕೋರಿರುತ್ತಾರೆ. ವಿಸ್ತರಣಾಧಿಕಾರಿಯವರ ವರದಿ ಹಾಗೂ ವರದಿಯೊಂದಿಗೆ ಲಗ್ತ ತತ್ಸಂಬಂಧಿ ದಾಖಲೆಗಳನ್ನು ಪರಿಶೀಲಿಸಲಾಗಿ, ಇವರ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳ ಉಪ–ಬಂಧಗಳಿಗನುಸಾರವಾಗಿ ನಿರ್ದಿಷ್ಟವಾದ ಮತ್ತು ಸ್ಪಷ್ಟವಾದ ದುರ್ನಡತೆಯ ವಿಷಯಗಳ ಆರೋಪ ಪಟ್ಟಿಯನ್ನೂ, ಪ್ರತಿಯೊಂದು ಆರೋಪ ವಿಷಯವನ್ನು ಸಮರ್ಥಿಸುವ ದುರ್ನಡತೆಯ ಆರೋಪಣೆಯ ವಿವರಣೆಯನ್ನೂ, ಆರೋಪ ವಿಷಯಗಳನ್ನು ಸಮರ್ಥಿಸುವ ದಸ್ತಾವೇಜುಗಳ ಮತ್ತು ಸಾಕ್ಷಿಗಳ ಪಟ್ಟಿಯನ್ನೂ ಅನುಕ್ರಮವಾಗಿ 1 ರಿಂದ 4ರ ವರೆಗಿನ ಅನುಬಂಧಗಳಾಗಿ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು–ಇವರ ಕಛೇರಿಯ ಉಲ್ಲೇಖ (4)ರ ತಿಳುವಳಿಕೆ ಪತ್ರದ ಲಗತ್ತಿನೊಂದಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮ 11(4)ರನ್ವಯ ಈ ನೌಕರರ ವಾಸ್ತವ್ಯದ ಸ್ವವಿಳಾಸಕ್ಕೆ ನೋಂದಣಿ ಅಂಚೆ ಮುಖಾಂತರ ಕಳುಹಿಸಿಕೊಡಲಾಯಿತು. ಆದರೆ, ನೌಕರರು ಸ್ವವಿಳಾಸದಲ್ಲಿ ವಾಸವಾಗಿಲ್ಲದ ಕಾರಣ ``Absent information served" ಎಂಬ ಷರಾದೊಂದಿಗೆ ಸದರಿ ಅಂಚೆಯು ವಾಪಸ್ಸು ಬಂದಿರುತ್ತದೆ. ಈ ಹಿನ್ನೆಲೆಯಲ್ಲಿ, ದೋಷಾರೋಪಣ ಪಟ್ಟಿಯನ್ನು ತಿಳುವಳಿಕೆ ಪತ್ರದೊಂದಿಗೆ ಮುದ್ದಾಂ ನೌಕರರಿಗೆ ಜ್ಯಾರಿಗೊಳಿಸಿ ನೌಕರರ ಸ್ವೀಕೃತಿಯನ್ನು ಪಡೆದು ಸಲ್ಲಿಸುವಂತೆಯೂ, ಒಂದುಪಕ್ಷ, ನೌಕರರು ಲಭ್ಯವಾಗದೇ ಇದ್ದಲ್ಲಿ, ತಿಳುವಳಿಕೆ ಪತ್ರ ಮತ್ತು ದೋಷಾರೋಪಣ ಪಟ್ಟಿಯನ್ನು ನೌಕರರ ಸ್ವವಿಳಾಸದ ಮನೆಯ ಗೋಡೆಗೆ ಅಂಟಿಸಿ ಸ್ಥಳೀಯರ ಮಹಜರು ನಡೆಸಿ, ಮಹಜರು ವರದಿಯನ್ನು ಛಾಯಾಚಿತ್ರದೊಂದಿಗೆ ಸಲ್ಲಿಸುವಂತೆಯೂ ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ತಾಲೂಕು ಪಂಚಾಯತ್, ಬಂಟ್ವಾಳ–ಇವರಿಗೆ ಉಲ್ಲೇಖ (5)ರಲ್ಲಿ ಸೂಚಿಸಲಾಯಿತು. ಅದರಂತೆ ದೋಷಾರೋಪಣ ಪಟ್ಟಿಯನ್ನು ತಿಳುವಳಿಕೆ ಪತ್ರದೊಂದಿಗೆ ಮುದ್ದಾಂ ನೌಕರರಿಗೆ ಜ್ಯಾರಿಗೊಳಿಸುವ ಸಲುವಾಗಿ, ಶ್ರೀ ಜಯಣ್ಣ, ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ತಾಲ್ಲೂಕು ಪಂಚಾಯತ್,

ಬಂಟ್ವಾಳ–ಇವರು ದಿನಾಂಕ: 01–04–2013ರಂದು, ಶ್ರೀ ಗೋಪಾಲಕೃಷ್ಣ ಭಟ್, ನಿಲಯ ಮೇಲ್ವಿಚಾರಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಪಾಣೆಮಂಗಳೂರು, ಬಂಟ್ವಾಳ ಇವರೊಂದಿಗೆ, ಈ ನೌಕರರು ವಾಸವಾಗಿದ್ದ ಬೋಜರಾಜ ಕಾಂಪೌಂಡು, ಕದ್ರಿ ನ್ಯೂ ರೋಡ್, ಬಿಜೈ, ಮಂಗಳೂರು–ಇಲ್ಲಿನ ವಾಸದ ಮನೆಗೆ ಭೇಟಿ ನೀಡಿದ್ದು, ಈ ನೌಕರರು ಪ್ರಸಕ್ತ ವಾಸದ ಮನೆಯನ್ನು ಬದಲಾಯಿಸಿ ಶ್ರೀ ರಾಮ ಭಜನಾ ಮಂದಿರದ ಬಳಿ, ಐ.ಟಿ.ಐ., ಕದ್ರಿ, ಮಂಗಳೂರು–ಇಲ್ಲಿ ವಾಸವಾಗಿರುತ್ತಾರೆ ಎಂದು ಸ್ಥಳೀಯರಿಂದ ತಿಳಿದು, ತದನಂತರ ಸದ್ರಿ ವಿಳಾಸದ ಮನೆಗೆ ಭೇಟಿ ನೀಡಿ, ನೌಕರರ ಮನೆಯನ್ನು ಖಾತರಿಪಡಿಸಿಕೊಂಡು, ಶ್ರೀ ರಾಮ ಭಜನಾ ಮಂದಿರದ ಬಳಿ, ಐ.ಟಿ.ಐ. ಕದ್ರಿ, ಮಂಗಳೂರು–ಇಲ್ಲಿನ ನೌಕರರ ವಾಸದ ಮನೆಯ ಗೋಡೆಗೆ ತಿಳುವಳಿಕೆ ಪತ್ರ ಮತ್ತು ದೋಷಾರೋಪಣ ಪಟ್ಟಿಯನ್ನು (ನೌಕರರು ಲಭ್ಯವಾಗದೇ ಇದ್ದ ಕಾರಣ) ಸ್ಥಳೀಯರ ಸಮ್ಮುಖದಲ್ಲಿ ಅಂಟಿಸಿ, ಸ್ಥಳೀಯರ ಮಹಜರು ನಡೆಸಿ, ಮಹಜರು ವರದಿಯನ್ನು ಛಾಯಾಚಿತ್ರದೊಂದಿಗೆ ಉಲ್ಲೇಖ (6)ರ ಲಗತ್ತು ವರದಿ ಸಲ್ಲಿಸಿರುತ್ತಾರೆ. ಆದಾಗ್ಯೂ, ಶ್ರೀ ವೇಣುಗೋಪಾಲ, ಅಡುಗೆ ಸಹಾಯಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ವಾಮದಪದವು, ಬಂಟ್ವಾಳ, ನಿಯೋಜನೆ ಮೇರೆಗೆ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿ ನಿಲಯ, ವಾಮದಪದವು, ಬಂಟ್ವಾಳ ತಾಲೂಕು, ದಕ್ಷಿಣ ಕನ್ನಡ ಜಿಲ್ಲೆ–ಇವರು ತಿಳುವಳಿಕೆ ಪತ್ರಕ್ಕೆ ಯಾವುದೇ ಸಮಜಾಯಿಷಿಕೆಯನ್ನು ನೀಡಿರುವುದಿಲ್ಲ. ಮಾತ್ರವಲ್ಲದೆ, ಕರ್ತವ್ಯಕ್ಕೆ ಕೂಡ ಹಾಜರಾಗಿರುವುದಿಲ್ಲ.

ಈ ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ, ದಿನಾಂಕ: 01–05–2012ರಿಂದ ಇವರ ನಿರಂತರ ಅನಧಿಕೃತ ಗೈರುಹಾಜರಿ ಹಾಗೂ ಈ ಬಗ್ಗೆ ಕಛೇರಿಯಿಂದ ನೀಡಲಾದ ಯಾವುದೇ ನೋಟಿಸಿಗೆ ಪ್ರತಿಕ್ರಿಯೆ ನೀಡದಿರುವುದನ್ನು, ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿ ಜಿಲ್ಲಾ ಕಛೇರಿ ಹಾಗೂ ಅಧೀನ ಕಛೇರಿಗಳಿಂದ ಪದೇ ಪದೇ ನೀಡಲಾಗಿರುವ ಅವಕಾಶವನ್ನು ಸದುಪಯೋಗಪಡಿಸಿಕೊಳ್ಳದೇ ಇರುವುದನ್ನು ಗಂಭೀರವಾಗಿ ಪರಿಗಣಿಸಿ, ಶ್ರೀ ವೇಣುಗೋಪಾಲ, ಅಡುಗೆ ಸಹಾಯಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ವಾಮದಪದವು, ಬಂಟ್ವಾಳ ನಿಯೋಜನೆ ಮೇರೆಗೆ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿ ನಿಲಯ, ವಾಮದಪದವು, ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ–ಇವರ ದಿನಾಂಕ: 01–05–2012ರಿಂದ ಈ ಆದೇಶದ ದಿನಾಂಕದವರೆಗೆ ಅಂದರೆ ದಿನಾಂಕ: 03–06–2013 ರವರೆಗಿನ ನಿರಂತರ ಅನಧಿಕೃತ ಗೈರು ಹಾಜರಿಯ ಆರೋಪಕ್ಕೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮ 11(20) ರನ್ವಯ, ನಿಲಯದ ಹಾಜರಾತಿ ವಹಿ, ವೇತನ ಬಟವಾಡೆ, ವಹಿ, ತಾಲೂಕು ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ತಾಲೂಕು ಪಂಚಾಯತ್, ಬಂಟ್ವಾಳ–ಇವರ ವರದಿಯನ್ನು ಹಾಗೂ ವರದಿಯೊಂದಿಗೆ ಸಲ್ಲಿಸಿರುವ ಆರೋಪಕ್ಕೆ ಸಂಬಂಧಿಸಿದ ಇನ್ನಿತರ ದಾಖಲೆಗಳು/ವಹಿಗಳನ್ನು ಪರಿಶೀಲಿಸಲಾಗಿ, ಈ ಕೆಳಕಂಡ ಅಂಶಗಳು ಶಿಸ್ತುಪ್ರಾಧಿಕಾರಿಯಾದ ನನ್ನ ಗಮನಕ್ಕೆ ಬಂದಿರುತ್ತದೆ.

ಆಪಾದಿತ ನೌಕರರು ದಿನಾಂಕ: 01–05–2012ರಿಂದ ಈ ಆದೇಶದ ದಿನಾಂಕದವರೆಗೆ ಅಂದರೆ ದಿನಾಂಕ: 03–06–2013ರವರೆಗೆ ಒಟ್ಟು 399 ದಿನಗಳು ಯಾವುದೇ ಮುನ್ಸೂಚನೆಯನ್ನು ನೀಡದೆ ಹಾಗೂ ಮೇಲಾಧಿಕಾರಿಗಳ ಪೂರ್ವಾನುಮತಿಯನ್ನು ಪಡೆಯದೆ ಕರ್ತವ್ಯಕ್ಕೆ ನಿರಂತರವಾಗಿ ಅನಧಿಕೃತ ಗೈರು ಹಾಜರಾಗಿರುವುದು; ಈ ಅವಧಿಯಲ್ಲಿ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿ ಜಿಲ್ಲಾ ಕಛೇರಿ/ಅಧೀನ ಕಛೇರಿಗಳಿಂದ ನೀಡಿರುವ ಸೂಚನೆಗಳನ್ನು ನಿರಂತರವಾಗಿ ನಿರ್ಲಕ್ಷಿಸಿರುವುದು ತನ್ಮೂಲಕ ಇವರು ಮೇಲಾಧಿಕಾರಿಗಳಿಗೆ ಅವಿಧೇಯತೆಯನ್ನು ತೋರಿರುವುದು ಮಾತ್ರವಲ್ಲದೆ, ನಿಲಯದ ವಿದ್ಯಾರ್ಥಿಗಳಿಗೆ ಸಮಯಕ್ಕೆ ಸರಿಯಾಗಿ ಊಟೋಪಚಾರಗಳನ್ನು ನೀಡುವಂತಹ ಗುರುತರವಾದ ಜವಾಬ್ದಾರಿಯನ್ನು ಹೊಂದಿರುವ ಅಡುಗೆ ಸಹಾಯಕರಾದ ಶ್ರೀ ವೇಣುಗೋಪಾಲ–ಇವರು ಅನಧಿಕೃತ ಗೈರು ಹಾಜರಾಗುವ ಮೂಲಕ ನಿಲಯದ ನಿರ್ವಹಣೆಗೆ ತೊಂದರೆಯನ್ನುಂಟು ಮಾಡಿರುವುದು ತೀವ್ರತರವಾದ ದುರ್ನಡತೆಯಾಗಿರುತ್ತದೆ ಮತ್ತು ಇವರು ನಾಲ್ಕು ತಿಂಗಳಿಗೂ ಮೀರಿ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವುದು ಇವರು ಕರ್ತವ್ಯದಲ್ಲಿ ಅನಾಸಕ್ತರಾಗಿರುವುದನ್ನು ತೋರಿಸುತ್ತದೆ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957ರ ನಿಯಮ 108ರ ಪ್ರಕಾರ ಸರ್ಕಾರಿ ಸೇವೆಯಿಂದ ವಜಾ ಮಾಡಬಹುದಾದ ಅಥವಾ ತೆಗೆದುಹಾಕಬಹುದಾದ ಪ್ರಕರಣವಾಗಿರುತ್ತದೆ.

ಆದ್ದರಿಂದ, ಈ ಪ್ರಕರಣದಲ್ಲಿ, ಶ್ರೀ ವೇಣುಗೋಪಾಲ, ಅಡುಗೆ ಸಹಾಯಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ವಾಮದಪದವು, ಬಂಟ್ವಾಳ, ನಿಯೋಜನೆ ಮೇರೆಗೆ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿ ನಿಲಯ, ವಾಮದಪದವು, ಬಂಟ್ವಾಳ ತಾಲೂಕು, ದಕ್ಷಿಣ ಕನ್ನಡ ಜಿಲ್ಲೆ–ಇವರು ದಿನಾಂಕ: 01–05–2012ರಿಂದ ಈ ಆದೇಶದ ದಿನಾಂಕದವರೆಗೆ ಅಂದರೆ ದಿನಾಂಕ: 03–06–2013ರವರೆಗೆ ಒಟ್ಟು 399 ದಿನಗಳು ಅಂದರೆ ನಾಲ್ಕು ತಿಂಗಳಿಗೂ ಹೆಚ್ಚಿನ ಅವಧಿಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿದ್ದು, ಆಪಾದಿತ ನೌಕರರ ಈ ಮೇಲಿನ ಅನಧಿಕೃತ ಗೈರು ಹಾಜರಾತಿ ಹಾಗೂ ದುರ್ನಡತೆ ಆರೋಪದ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ–8 (viii)ರ ಕಠಿಣ ದಂಡನೆಯನ್ನು ವಿಧಿಸಲು ನಿರ್ಧರಿಸಿದ್ದು, ಪ್ರಯುಕ್ತ ಈ ಕೆಳಕಂಡ ಆದೇಶ.

**ಆದೇಶ**

**ಸಂಖ್ಯೆ: ಬಿಸಿಎಂ/ವಿನಿ/ಸಿಬ್ಬಂದಿ/ಸಿಆರ್–14/07–08, ದಿನಾಂಕ: 03–06–2013**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 11 ಮತ್ತು ನಿಯಮ 11(ಎ)ನ್ನು ಓದಿಕೊಂಡಂತೆ, ಅದೇ ನಿಯಮಗಳ ನಿಯಮ 9 (I) (3)ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು–ಆದ ನಾನು, ಶ್ರೀ ವೇಣುಗೋಪಾಲ, ಅಡುಗೆ ಸಹಾಯಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ವಾಮದಪದವು, ಬಂಟ್ವಾಳ, ನಿಯೋಜನೆ ಮೇರೆಗೆ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿ ನಿಲಯ, ವಾಮದಪದವು, ಬಂಟ್ವಾಳ ತಾಲೂಕು, ದಕ್ಷಿಣ ಕನ್ನಡ ಜಿಲ್ಲೆ– ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957ರ ನಿಯಮ 108ರನ್ವಯ ತಕ್ಷಣದಿಂದ ಅನ್ವಯಿಸುವಂತೆ ಸೇವೆಯಿಂದ ವಜಾ ಮಾಡಿರುತ್ತೇನೆ.

ಸದರಿ ನೌಕರರ ದಿನಾಂಕ: 01–05–2012ರಿಂದ ಈ ಆದೇಶದ ದಿನಾಂಕದವರೆಗೆ ಅಂದರೆ ದಿನಾಂಕ: 03–06–2013ರವರೆಗೆ ಒಟ್ಟು 399 ದಿನಗಳ ಅನಧಿಕೃತ ಗೈರು ಹಾಜರಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957ರ ನಿಯಮ 254 ರನ್ವಯ ಲೆಕ್ಕಕ್ಕಿಲ್ಲದ ಅವಧಿ (Dies-non service) ಎಂದು ಪರಿಗಣಿಸಿ ಆದೇಶಿಸಿದೆ.

**ಜಿಲ್ಲಾ ಅಧಿಕಾರಿ,**
**ಹಿಂದುಳಿದ ವರ್ಗಗಳ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಇಲಾಖೆ,**
**ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು–4**

**PR 2380**

## ಸಹಕಾರ ಸಂಘಗಳ ಜಂಟಿ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ ಚಾಮರಾಜಪೇಟೆ, ಬೆಂಗಳೂರು–18

### ದಾವೆ ಸಂಖ್ಯೆ: ಜೆಆರ್‌ಬಿ/ಡಿಐಎಸ್/167/1996–97, ಆದೇಶ ದಿನಾಂಕ: 23–09–2012

**ವಾದಿ** **ವಿರುದ್ಧ** **ಪ್ರತಿವಾದಿಗಳು**

ಮುಖ್ಯ ಕಾರ್ಯನಿರ್ವಹಣಾಧಿಕಾರಿ,
ಬಿಬಿಆರ್ ಅಂಡ್ ಆರ್‌ಡಿಸಿಸಿ ಬ್ಯಾಂಕ್ ನಿ.,
ಚಾಮರಾಜಪೇಟೆ, ಬೆಂಗಳೂರು–560 018

1. ಕಾರ್ಯದರ್ಶಿ, ಕೊನಾರ್ಕ್ ಕ್ರೆಡಿಟ್ ಕೋ ಆಪರೇಟಿವ್ ಸೊಸೈಟಿ ಲಿ.,
ನಂ. 56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ, ಬೆಂಗಳೂರು–04
2. ಡಾ॥ ಹೆಚ್.ಪಿ. ಶಾಂತಕುಮಾರ್ ಬಿನ್ ಹೆಚ್. ಕೆ. ಪುಟ್ಟಸ್ವಾಮಿಗೌಡ, ಅಧ್ಯಕ್ಷರು,
ಕೊನಾರ್ಕ್ ಕ್ರೆಡಿಟ್ ಕೋ ಆಪರೇಟಿವ್ ಸೊಸೈಟಿ ಲಿ.,
ನಂ. 56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ, ಬೆಂಗಳೂರು–04
3. ಶ್ರೀ ಸುರೇಶ್ ಬಿನ್ ಶ್ರೀ ರಘು, ಕಾರ್ಯದರ್ಶಿ,
ಕೊನಾರ್ಕ್ ಕ್ರೆಡಿಟ್ ಕೋ ಆಪರೇಟಿವ್ ಸೊಸೈಟಿ ಲಿ.,
ನಂ. 56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ, ಬೆಂಗಳೂರು–04
4. ಶ್ರೀ ಅಜಿತ್ ಎಸ್. ಚಡಗರ್ ಬಿನ್ ಸತ್ಯರಾಜ್ ಚಡಗರ್, ನಿರ್ದೇಶಕರು,
ಕಾರ್ಯದರ್ಶಿ, ಕೊನಾರ್ಕ್ ಕ್ರೆಡಿಟ್ ಕೋ ಆಪರೇಟಿವ್ ಸೊಸೈಟಿ ಲಿ.,
ನಂ. 56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ, ಬೆಂಗಳೂರು–04
5. ಶ್ರೀ ಬಿ.ಜೆ. ಸುರೇಶ್ ಬಿನ್ ಲೇಟ್ ಜವರೇಗೌಡ, ನಿರ್ದೇಶಕರು,
ಕೊನಾರ್ಕ್ ಕ್ರೆಡಿಟ್ ಕೋ ಆಪರೇಟಿವ್ ಸೊಸೈಟಿ ಲಿ.,
ನಂ. 56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ, ಬೆಂಗಳೂರು–04
6. ಶ್ರೀಮತಿ ಕೆ.ವಿ. ಉಷಾ ಕೋಂ ಹೆಚ್.ಪಿ. ಶಾಂತಕುಮಾರ್, ನಿರ್ದೇಶಕರು,
ಕೊನಾರ್ಕ್ ಕ್ರೆಡಿಟ್ ಕೋ ಆಪರೇಟಿವ್ ಸೊಸೈಟಿ ಲಿ.,
ನಂ. 56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ, ಬೆಂಗಳೂರು–04
7. ಶ್ರೀಮತಿ ಸಾವಿತ್ರಮ್ಮ ಕೋಂ ಲೇಟ್ ಕೆ. ವೀರಯ್ಯ, ನಿರ್ದೇಶಕರು,
ಕಾರ್ಯದರ್ಶಿ, ಕೊನಾರ್ಕ್ ಕ್ರೆಡಿಟ್ ಕೋ ಆಪರೇಟಿವ್ ಸೊಸೈಟಿ ಲಿ.,
ನಂ. 56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ, ಬೆಂಗಳೂರು–04
8. ಶ್ರೀ ದೇವಾನಂದ ಪೈ. ಕೆ. ಬಿನ್ ಗೋಪಾಲರಾವ್ ಕೆ., ನಿರ್ದೇಶಕರು,
ಕಾರ್ಯದರ್ಶಿ, ಕೊನಾರ್ಕ್ ಕ್ರೆಡಿಟ್ ಕೋ ಆಪರೇಟಿವ್ ಸೊಸೈಟಿ ಲಿ.,
ನಂ. 56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ, ಬೆಂಗಳೂರು–04
9. ಶ್ರೀ ಉಲ್ಲಾಸ್ ಎಸ್. ಚಡಗರ್ ಬಿನ್ ಸತ್ಯರಾಜ್ ಚಡಗರ್, ನಿರ್ದೇಶಕರು,
ಕಾರ್ಯದರ್ಶಿ, ಕೊನಾರ್ಕ್ ಕ್ರೆಡಿಟ್ ಕೋ ಆಪರೇಟಿವ್ ಸೊಸೈಟಿ ಲಿ.,
ನಂ. 56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ, ಬೆಂಗಳೂರು–04
10. ಶ್ರೀ ನರಸಿಂಹಯ್ಯ ಬಿನ್ ಗಂಗಣ್ಣ, ನಿರ್ದೇಶಕರು,
ಕಾರ್ಯದರ್ಶಿ, ಕೊನಾರ್ಕ್ ಕ್ರೆಡಿಟ್ ಕೋ ಆಪರೇಟಿವ್ ಸೊಸೈಟಿ ಲಿ.,
ನಂ. 56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ, ಬೆಂಗಳೂರು–04
11. ಶ್ರೀಮತಿ ಹನುಮಕ್ಕ ಕೋಂ ನರಸಿಂಹಯ್ಯ, ನಿರ್ದೇಶಕರು,
ಕಾರ್ಯದರ್ಶಿ, ಕೊನಾರ್ಕ್ ಕ್ರೆಡಿಟ್ ಕೋ ಆಪರೇಟಿವ್ ಸೊಸೈಟಿ ಲಿ.,
ನಂ. 56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ, ಬೆಂಗಳೂರು–04
12. ಶ್ರೀ ವಿ.ಎಸ್. ನಾಯ್ಕ ಬಿನ್ ಹರಿಹರ ನಾಯ್ಕ, ನಿರ್ದೇಶಕರು,
ಕಾರ್ಯದರ್ಶಿ, ಕೊನಾರ್ಕ್ ಕ್ರೆಡಿಟ್ ಕೋ ಆಪರೇಟಿವ್ ಸೊಸೈಟಿ ಲಿ.,
ನಂ. 56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ, ಬೆಂಗಳೂರು–04

13. ಶ್ರೀ ಕೆ. ಜನಾರ್ಧನ ಬಿನ್ ಲೇಟ್ ಕೃಷ್ಣಪ್ಪ, ನಿರ್ದೇಶಕರು, ಕಾರ್ಯದರ್ಶಿ, ಕೊನಾರ್ಕ್ ಕ್ರೆಡಿಟ್ ಕೋ ಆಪರೇಟಿವ್ ಸೊಸೈಟಿ ಲಿ., ನಂ. 56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ, ಬೆಂಗಳೂರು–04

14. ಶ್ರೀ ಯು. ಸದಾಶಿವಶೆಟ್ಟಿ ಬಿನ್ ಯು. ಸುಬ್ಬಣ್ಣ ಶೆಟ್ಟಿ, ನಿರ್ದೇಶಕರು, ಕಾರ್ಯದರ್ಶಿ, ಕೊನಾರ್ಕ್ ಕ್ರೆಡಿಟ್ ಕೋ ಆಪರೇಟಿವ್ ಸೊಸೈಟಿ ಲಿ., ನಂ. 56, ಸುಬ್ಬರಾಮಚೆಟ್ಟಿ ರಸ್ತೆ, ನೆಟ್ಟಕಲ್ಲಪ್ಪ ವೃತ್ತ, ಬಸವನಗುಡಿ, ಬೆಂಗಳೂರು–04

15. ಶ್ರೀ ನಾರಾಯಣಗೌಡ, ಮೇಜರ್ ಬಿನ್ ಪುಟ್ಟೇಗೌಡ, ಮಾಜಿ ಅಧ್ಯಕ್ಷರು ಹಾಗೂ ಈಗಿನ ನಿರ್ದೇಶಕರು, ಬಿಡಿ ಅಂಡ್ ಬಿಆರ್‌ಡಿಸಿಸಿ ಬ್ಯಾಂಕ್ ನಿ., ಕೆರಳಾಳುಸಂದ್ರ, ಮಾಳಗಾಳ ಪೋಸ್ಟ್, ಕಸಬಾ ಹೋಬಳಿ, ಕನಕಪುರ ತಾಲ್ಲೂಕು, ಬೆಂಗಳೂರು (ಗ್ರಾ.) ಜಿಲ್ಲೆ

16. ಶ್ರೀ ಎಸ್.ಜಿ. ಚಲುವಯ್ಯ, ಮೇಜರ್, ಮಾಜಿ ಉಪಾಧ್ಯಕ್ಷರು, ಬಿಡಿ ಅಂಡ್ ಬಿಆರ್‌ಡಿಸಿಸಿ ಬ್ಯಾಂಕ್ ನಿ., ಸೊಂಡೇಕೊಪ್ಪ, ಸೊಂಡೇಕೊಪ್ಪ ಪೋಸ್ಟ್, ನೆಲಮಂಗಲ ತಾಲ್ಲೂಕು, ಬೆಂಗಳೂರು (ಗ್ರಾ.) ಜಿಲ್ಲೆ

17. ಶ್ರೀ ವಿ. ಚನ್ನಪ್ಪ, ಮೇಜರ್, (ಮೃತಪಟ್ಟಿರುತ್ತಾರೆ) ಮಾಜಿ ನಿರ್ದೇಶಕರು, ಬಿಡಿ ಅಂಡ್ ಬಿಆರ್‌ಡಿಸಿಸಿ ಬ್ಯಾಂಕ್ ನಿ., ನೆರಳಘಟ್ಟ, ಹಣಬೆ ಪೋಸ್ಟ್, ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು (ಗ್ರಾ.) ಜಿಲ್ಲೆ

18. ಶ್ರೀ ಎ. ನರಸಿಂಹಯ್ಯ, ಮೇಜರ್, ಮಾಜಿ ನಿರ್ದೇಶಕರು, ಬಿಡಿ ಮತ್ತು ಬಿಆರ್‌ಡಿಸಿಸಿ ಬ್ಯಾಂಕ್ ನಿ., ಗಂಟಿಗಾನಹಳ್ಳಿ ಪೋಸ್ಟ್, ಕುರುವೇಗೆರೆ, ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು (ಗ್ರಾ.) ಜಿಲ್ಲೆ

19. ಶ್ರೀ ಎನ್.ಎಸ್. ನರಸೇಗೌಡ, ಮೇಜರ್, ಮಾಜಿ ನಿರ್ದೇಶಕರು, ಬಿಡಿ ಮತ್ತು ಬಿಆರ್‌ಡಿಸಿಸಿ ಬ್ಯಾಂಕ್ ನಿ., ನಂ. 692, ಎ. 8ನೇ ಮೈನ್, 3ನೇ ಸ್ಟೇಜ್, 3ನೇ ಬ್ಲಾಕ್, ಬಸವೇಶ್ವರ ನಗರ, ಬೆಂಗಳೂರು–79

20. ಶ್ರೀ ಬಿ. ರಾಮಿರೆಡ್ಡಿ, ಮೇಜರ್, ಮಾಜಿ ವ್ಯವಸ್ಥಾಪಕ ನಿರ್ದೇಶಕರು, ಬಿಡಿ ಮತ್ತು ಬಿಆರ್‌ಡಿಸಿಸಿ ಬ್ಯಾಂಕ್ ನಿ., ನಂ. 124, ಎ. ಫ್ಲೋರ್, 26ನೇ ಕ್ರಾಸ್, 6ನೇ ಬ್ಲಾಕ್, ಜಯನಗರ, ಬೆಂಗಳೂರು–20

21. ಶ್ರೀ ಕೆ.ಟಿ. ವೆಂಕಟಸ್ವಾಮಿ, ಮೇಜರ್, ಮಾಜಿ ಶಾಖಾ ವ್ಯವಸ್ಥಾಪಕರು (ನಿವೃತ್ತ), ಕೇಂದ್ರ ಕಛೇರಿ ಶಾಖೆ, ಬಿಡಿ ಮತ್ತು ಬಿಆರ್‌ಡಿಸಿಸಿ ಬ್ಯಾಂಕ್ ನಿ., ನಂ. 1013ಇ., ಮೂಕಾಂಬಿಕ ಎ.ಆರ್. ಅವೆನ್ಯೂ, ನ್ಯೂ ತಿಪ್ಪಸಂದ್ರ, ಬೆಂಗಳೂರು–75

22. ಶ್ರೀ ಎಂ. ನಾಗರಾಜ, (ಅಂಡರ್ ಸಸ್‌ಪೆನ್ಷನ್) ಶಾಖಾ ವ್ಯವಸ್ಥಾಪಕರು, ಕೇಂದ್ರ ಕಛೇರಿ, ಬಿಡಿ ಮತ್ತು ಬಿಆರ್‌ಡಿಸಿಸಿ ಬ್ಯಾಂಕ್ ನಿ., ದಿಡ್ಡಿ ಬಾಗಿಲು, ಮರಾಠ ಸ್ಟ್ರೀಟ್, ತ್ಯಾಗರಾಜ ರೋಡ್, ಆನೇಕಲ್ ಟೌನ್, ಬೆಂಗಳೂರು (ಗ್ರಾ.) ಜಿಲ್ಲೆ

23. ಶ್ರೀ ಹೆಚ್. ಜೆ. ರಂಗಪ್ಪ (ಅಂಡರ್ ಸಸ್ಪೆಷನ್) ಸೂಪರ್‌ವೈಜರ್, ಕೇಂದ್ರ ಕಛೇರಿ, ಬಿಡಿ ಮತ್ತು ಬಿಆರ್‌ಡಿಸಿಸಿ ಬ್ಯಾಂಕ್ ನಿ., ನಂ. 213, 1ನೇ ಕ್ರಾಸ್, ರೆಂಕೋ ಲೇಔಟ್, ವಿಜಯನಗರ, ಬೆಂಗಳೂರು–40

24. ಶ್ರೀ ರಾಮಕೃಷ್ಣ, ಮೇಜರ್, (ಅಂಡರ್ ಸಸ್‌ಪೆನ್ಷನ್) ಶಾಖಾ ವ್ಯವಸ್ಥಾಪಕರು, ಕೇಂದ್ರ ಕಛೇರಿ, ಬಿಡಿ ಮತ್ತು ಬಿಆರ್‌ಡಿಸಿಸಿ ಬ್ಯಾಂಕ್ ನಿ., (ಪ್ಲಾನಿಂಗ್ ಅಂಡ್ ಡೆವೆಲಪ್‌ಮೆಂಟ್ ಶಾಖೆ) ನಂ. 221, 5ನೇ ಕ್ರಾಸ್, 1ನೇ ಮೈನ್, 1ನೇ ಹಂತ, ಕೆ.ಹೆಚ್.ಬಿ. ಕಾಲೋನಿ, ಬಸವೇಶ್ವರ ನಗರ, ಬೆಂಗಳೂರು–79

25. ಶ್ರೀ ಹೆಚ್.ಬಿ. ಉಮೇಶ್ (ಪೌತಿ) ಅವರ ವಾರಸುದಾರರು

25. ಶ್ರೀಮತಿ ಹೆಚ್.ಎಸ್. ಹರಿಣಿ ಕೋಂ ಲೇಟ್

1ಎ. ಹೆಚ್.ಬಿ. ಉಮೇಶ್,

1ಬಿ. ಶ್ರೀ ಕೀರ್ತಿ ಕಂದಾ ಬಿನ್ ಲೇಟ್ ಹೆಚ್.ಬಿ. ಉಮೇಶ್

1ಸಿ ಶ್ರೀ ಚರಣ್ ಬಿನ್ ಲೇಟ್ ಹೆಚ್.ಬಿ. ಉಮೇಶ್

**ವಿಳಾಸ :**

ನಂ. 112, ಐ.ಸಿ.ಎಸ್.ಸಿ. ಮೈನ್ ರೋಡ್, ನಾಗರಭಾವಿ, ಬೆಂಗಳೂರು–72

26. ಶ್ರೀ ಬಿ. ಮೃತ್ಯುಂಜಯ, (ಅಂಡರ್ ಸಸ್‌ಪೆನ್ಷನ್), ಸೀನಿಯರ್ ಅಸಿಸ್ಟೆಂಟ್, ಬಿಡಿ ಅಂಡ್ ಬಿಆರ್‌ಡಿಸಿಸಿ ಬ್ಯಾಂಕ್ ನಿ., (ಪ್ಲಾನಿಂಗ್ ಅಂಡ್ ಡೆವೆಲಪ್‌ಮೆಂಟ್ ಶಾಖೆ) ನಂ. 1087, 15ನೇ ಬಿ. ಕ್ರಾಸ್, 2ನೇ ಹಂತ, ಯಲಹಂಕ ನ್ಯೂ ಟೌನ್, ಬೆಂಗಳೂರು–64

**"1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಆದೇಶಕ್ಕೆ ಮುನ್ನ ಜಪ್ತಿ ಮಾಡುವ ಸಲುವಾಗಿ 9ನೇ ಪ್ರತಿವಾದಿಗೆ ನೋಟೀಸು"**

ವಾದಿ ಬ್ಯಾಂಕು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70 ರಡಿಯಲ್ಲಿ ದಾವಾ ಅರ್ಜಿಯನ್ನು ಸಲ್ಲಿಸಿ, (1)ರಿಂದ (26) ಗಳಿಂದ ರೂ. 4,39,26,119/– (ರೂ. ನಾಲ್ಕು ಕೋಟಿ ಮೂವತ್ತೊಂಬತ್ತು ಲಕ್ಷ ಇಪ್ಪತ್ತಾರು ಸಾವಿರದ ನೂರ ಹತ್ತೊಂಬತ್ತು ಮಾತ್ರ) ಮೊತ್ತಕ್ಕೆ ದಿನಾಂಕ: 24–05–1996ರಿಂದ ಸಾಲಿಯಾನ ಶೇ. 22ರಷ್ಟು ಬಡ್ಡಿ ದರದಂತೆ ಅಸಲು ಮತ್ತು ಬಡ್ಡಿ ವಸೂಲಾತಿಗಾಗಿ ಪ್ರತಿವಾದಿಗಳಿಂದ ಜಂಟಿಯಾಗಿ ಇಲ್ಲವೇ ಪ್ರತ್ಯೇಕವಾಗಿ ವಸೂಲಿ ಮಾಡಿಕೊಳ್ಳಲು ಆದೇಶ ಕೋರಿ ದಾವೆಯನ್ನು ಹೂಡಿರುತ್ತಾರೆ. ಈ ದಾವೆಯನ್ನು ವಿಚಾರಣೆಗೆ ತೆಗೆದುಕೊಂಡು ವಿಚಾರಣೆ ನಡೆಸಲಾಗುತ್ತಿದೆ. ಪ್ರಕರಣದ ವಿಚಾರಣಾ ಹಂತದಲ್ಲಿ ವಾದಿಯು ದಿನಾಂಕ: 23–09–2013ರಂದು ಪ್ರಮಾಣ ಪತ್ರದೊಂದಿಗೆ ಕಲಂ 103ರ ಅಡಿಯಲ್ಲಿ ಅರ್ಜಿಯನ್ನು ಸಲ್ಲಿಸಿ, ಪ್ರಕರಣದ 9ನೇ ಪ್ರತಿವಾದಿ ಮತ್ತು ಅವರ ತಾಯಿಯ ಜಂಟಿ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಆದೇಶಪೂರ್ವ ಜಪ್ತಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

2. ಅರ್ಜಿದಾರರು ಕಲಂ 103ರ ಅರ್ಜಿಯ ಜೊತೆ ಸಲ್ಲಿಸಲಾಗಿರುವ ಪ್ರಮಾಣ ಪತ್ರದಲ್ಲಿ ವಾದಿ ಬ್ಯಾಂಕಿನ ಆಡಳಿತ ಮಂಡಳಿಯನ್ನು ಸಹಕಾರ ಇಲಾಖೆಯು 1994ನೇ ಸಾಲಿನಲ್ಲಿ ರದ್ದುಮಾಡಿರುತ್ತದೆ, ಈ ಆದೇಶವನ್ನು ವಾದಿ ಬ್ಯಾಂಕಿನ ಬಾಧಿತ ವ್ಯಕ್ತಿಗಳು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಿದ್ದು, ರಿಟ್ ಅಪೀಲ್ ಸಂಖ್ಯೆ 2218 ಮತ್ತು 2219/1991 ಹಾಗೂ 1992/1994 ರಿಟ್ ಅಪೀಲ್ ಅನ್ವಯ ಮಾನ್ಯ ನ್ಯಾಯಾಲಯವು ಪ್ರತಿವಾದಿ 15 ರಿಂದ 19 ರವರುಗಳನ್ನು Government Nominee as Ad-Hoc Committee members to from bank administration till holding of new election on 02-12-1995ರ ಅನ್ವಯ ಸದರಿ ಅಡ್‌ಹಾಕ್ ಕಮಿಟಿಯು ದಿನಾಂಕ: 13–05–1995ರವರೆಗೆ ಕಾರ್ಯನಿರ್ವಹಿಸಿರುತ್ತದೆ. ಈ ಅವಧಿಯಲ್ಲಿ 15ನೇ ಪ್ರತಿವಾದಿಯು ಅಡ್‌ಹಾಕ್ ಕಮಿಟಿ ಛೇರ್‌ಮನ್ ಆಗಿ ಕಾರ್ಯನಿರ್ವಹಿಸಿ, ಈ ಅವಧಿಯಲ್ಲಿ ಸಾಲಗಳನ್ನು ಮಂಜೂರು ಮಾಡಿರುತ್ತಾರೆ. ಆದರೆ ಅಡ್‌ಹಾಕ್ ಕಮಿಟಿಯು ವಾದಿ ಬ್ಯಾಂಕಿನಲ್ಲಿ ರೂ. 4.00 ಕೋಟಿಗಳ ಸಾಲ ಕೋರಿ 1ನೇ ಪ್ರತಿವಾದಿ ಸಂಘವು ಅರ್ಜಿಯನ್ನು ಸಲ್ಲಿಸಿ, ಸಾಲವನ್ನು ಪಡೆದಿರುತ್ತಾರೆ. ಆದರೆ ಈ ಸಾಲ ಮಂಜೂರಾತಿಯಲ್ಲಿ ಅಡ್‌ಹಾಕ್ ಕಮಿಟಿಯು ಗೌರವ ಉಚ್ಚ ನ್ಯಾಯಾಲಯದ ಆದೇಶ, ಸಂಘದ ಬೈಲಾ ಮತ್ತು ಬ್ಯಾಂಕಿನ ಸಾಲ ನಿಯಮ ಮತ್ತು ನಿಬಂಧನೆಗಳನ್ನು ಉಲ್ಲಂಘನೆ ಮಾಡಿ 1ನೇ ಪ್ರತಿವಾದಿ ಸಂಘದ ನಿರ್ದೇಶಕರು ಮತ್ತು ಬ್ಯಾಂಕಿನ ಸಿಬ್ಬಂದಿಗಳು ಬ್ಯಾಂಕಿಗೆ ಸುಳ್ಳು ಮಾಹಿತಿ ನೀಡಿ, ಮೋಸ ಮಾಡಿ ಸಾಲವನ್ನು ಪಡೆದಿರುತ್ತಾರೆ. ಆದರೆ ಪ್ರಸ್ತುತ 1ನೇ ಪ್ರತಿವಾದಿ ಸಂಘವು ತನ್ನ ಕಾರ್ಯಚಟುವಟಿಕೆ ನಡೆಸದೇ ಇರುವಂತಹ ಸ್ಥಿತಿಯನ್ನು ತಲುಪಿದ್ದು, ಮುಂದೆಯೂ ಸಹ ಸಂಘದ ಕಾರ್ಯ ಚಟುವಟಿಕೆ ನಡೆಸುವ ಸಾಧ್ಯತೆಗಳು ಇಲ್ಲವೆಂದು ಮನಗಂಡು ಕಲಂ 70 ರಡಿಯಲ್ಲಿ ಸಾಲ ವಸೂಲಾತಿಗಾಗಿ ದಾವೆಯನ್ನು ಹೂಡಲಾಗಿದೆ. ಈ ಎಲ್ಲಾ ವ್ಯವಹಾರಗಳಿಗೆ ಅಡ್‌ಹಾಕ್ ಕಮಿಟಿ ಸದಸ್ಯರು, ಬ್ಯಾಂಕಿನ ನೌಕರರು ಮತ್ತು 1ನೇ ಪ್ರತಿವಾದಿ ಸಂಘದ ಕಾರ್ಯಕಾರಿ ಮಂಡಲಿ ಸದಸ್ಯತು ಒಡಗೂಡಿ ವೈಯಕ್ತಿಕವಾಗಿ ಮತ್ತು ಜಂಟಿಯಾಗಿ ಅವ್ಯವಹಾರ ನಡೆಸಿ, ಅರ್ಜಿದಾರನ ಬ್ಯಾಂಕಿನಿಂದ ಸಾಲ ಮೊತ್ತವನ್ನು ಪಡೆದು ಉಪಯೋಗಿಸಿಕೊಂಡು, ಬ್ಯಾಂಕಿಗೆ ನಷ್ಟ ಉಂಟಾಗಲು ಕಾರಣಕರ್ತರಾಗಿರುತ್ತಾರೆ. ಈ ಹಿನ್ನೆಲೆಯಲ್ಲಿ ದಾವೆಯನ್ನು ಹೂಡಲಾಗಿದೆ. ಆದರೆ, ಈ ದಾವೆ ಇತ್ಯರ್ಥವಾಗುವಲ್ಲಿ ಕಾನೂನು ರೀತ್ಯಾ ಸಾಮಾಜಿಕ ನ್ಯಾಯ ತತ್ವಗಳನ್ನು ಅಳವಡಿಸಿಕೊಂಡು, ನಡವಳಿಕೆಗಳನ್ನು ನಡೆಸಿ, ದಾವೆಯನ್ನು ಇತ್ಯರ್ಥಪಡಿಸುವಲ್ಲಿ ಸಾಕಷ್ಟು ಸಮಯಾವಕಾಶವನ್ನು ತೆಗೆದುಕೊಳ್ಳುತ್ತಿದ್ದು, ಈ ಮಧ್ಯ ಪ್ರತಿವಾದಿಗಳು ತಮ್ಮ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಮಾರಾಟ ಮಾಡುವ ಸಾಧ್ಯತೆಗಳಿರುತ್ತದೆ. ಒಂದು ವೇಳೆ ಈ ರೀತಿ ಪ್ರತಿವಾದಿಗಳು ತಮ್ಮ ತಮ್ಮ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಮಾರಾಟ ಮಾಡಿದ ಪಕ್ಷದಲ್ಲಿ ಈ ದಾವೆಯ ಅಂತಿಮ ಆದೇಶ ಅರ್ಜಿದಾರ ಬ್ಯಾಂಕಿನ ಪರವಾಗಿ ಬಂದರೂ ಸಹ, ಅವಾರ್ಡ್ ಮೊತ್ತವನ್ನು ಪ್ರತಿವಾದಿಗಳಿಂದ ವಸೂಲಿ ಮಾಡಿಕೊಳ್ಳಲು ಸಾಧ್ಯವಾಗದ ಪರಿಸ್ಥಿತಿ ಉಂಟಾಗುವ ಸಾಧ್ಯತೆ ಇರುವುದರಿಂದ, ಕಲಂ 103ರ ಅಡಿಯಲ್ಲಿ ಸಲ್ಲಿಸಲಾಗಿರುವ ಅರ್ಜಿ ಆಧಾರಿತ 9ನೇ ಪ್ರತಿವಾದಿ ಮತ್ತು ಆತನ ತಾಯಿಯ ಹೆಸರಿನಲ್ಲಿ ಜಂಟಿಯಾಗಿರುವ ಸ್ಥಿರಾಸ್ತಿಯನ್ನು ಆದೇಶ ಪೂರ್ವ ಜಪ್ತಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

3. ಮುಂದುವರೆದು, ಪ್ರತಿವಾದಿ 4 ಮತ್ತು 9 ರವರು 1ನೇ ಪ್ರತಿವಾದಿಯ ಸಂಘದಲ್ಲಿ ಸದಸ್ಯರಾಗಿ, ನಿರ್ದೇಶಕರಾಗಿ ಕೆಲಸ ನಿರ್ವಹಿಸಿದ್ದು, ಸದರಿಯವರು ಸಾಲ ಪಡೆಯುವ ಸಮಯದಲ್ಲಿ ತಮಗೆ ನಿಹಿತವಾಗಿದ್ದ ಅಧಿಕಾರ ಮತ್ತು ಜವಾಬ್ದಾರಿಗಳಂತೆ, ಬ್ಯಾಂಕಿನಿಂದ ಪಡೆದ ಸಾಲಕ್ಕೆ ಕಾರಣಕರ್ತರಾಗಿರುತ್ತಾರೆ. ಆದಕಾರಣ ಪ್ರತಿವಾದಿ 9ರವರ ಸ್ಥಿರಾಸ್ತಿಯನ್ನು ಜಪ್ತಿ ಮಾಡುವುದು ಸಮಂಜಸವೆಂದು ತಿಳಿಸಿರುತ್ತಾರೆ.

4. ವಾದಿಯು ಕಲಂ 103ರ ಅಡಿಯಲ್ಲಿ ಸಲ್ಲಿಸಿರುವ ಅರ್ಜಿಯಲ್ಲಿ ತಿಳಿಸಿರುವ ಸ್ಥಿರಾಸ್ತಿಗಳ ದಾಖಲಾತಿಗಳನ್ನು ಪರಿಶೀಲಿಸಲಾಗಿ 9ನೇ ಪ್ರತಿವಾದಿ ಮತ್ತು ಆತನ ತಾಯಿಯ ಹೆಸರಿನಲ್ಲಿ ದಿನಾಂಕ: 07–05–2004ರಂದು ಅರ್ಜಿಯಲ್ಲಿ ನಮೂದಿಸಿರುವ ಷೆಡ್ಯೂಲ್ ಸ್ವತ್ತು 9ನೇ ಪ್ರತಿವಾದಿ ಮತ್ತು ಆತನ ತಾಯಿಯ ಹೆಸರಿನಲ್ಲಿ ಜಂಟಿಯಾಗಿರುವುದು ದಾಖಲಾತಿಗಳಿಂದ ಕಂಡುಬರುತ್ತದೆ. ಆದರೆ 9ನೇ ಪ್ರತಿವಾದಿ ತಾಯಿಯವರು ಈ ಪ್ರಕರಣದಲ್ಲಿ ಪ್ರತಿವಾದಿಯಾಗಿಲ್ಲದೇ ಇರುವುದನ್ನು ನ್ಯಾಯಾಲಯವು ಗಮನಿಸಿದೆ. ಆದರೆ 9ನೇ ಪ್ರತಿವಾದಿಯ ಷೆಡ್ಯೂಲ್ ಸ್ವತ್ತಿನ ಮೇಲೆ ಹಕ್ಕು ಬಾಧ್ಯತೆಯನ್ನು ಹೊಂದಿರುವುದರಿಂದ 9ನೇ ಪ್ರತಿವಾದಿಯು ತನ್ನ ಹಕ್ಕು ಬಾಧ್ಯತೆಗಳನ್ನು ಚಲಾಯಿಸಿ ಷೆಡ್ಯೂಲ್ ಸ್ವತ್ತನ್ನು ಪರಭಾರೆ ಮಾಡಿದಲ್ಲಿ ಈ ದಾವಾ ಪ್ರಕರಣದಲ್ಲಿ ಅಂತಿಮ ಆದೇಶ ಹೊರಬಿದ್ದು, 9ನೇ ಪ್ರತಿವಾದಿಯಿಂದ ವಸೂಲಾಗತಕ್ಕ ಮೊಗಲಗಿಗೆ ಆದೇಶವಾದಲ್ಲಿ ಅಂಥ ಮೊತ್ತವನ್ನು ವಸೂಲು ಮಾಡುವುದು ಕಷ್ಟಸಾಧ್ಯವಾಗುವುದನ್ನು ಮನಗಂಡು ಅರ್ಜಿದಾರರು 9ನೇ ಪ್ರತಿವಾದಿ ಹೆಸರಿನಲ್ಲಿರುವ ಜಂಟಿ ಸ್ಥಿರಸ್ವತ್ತನ್ನು ಕಲಂ 103ರಡಿಯಲ್ಲಿ ಆದೇಶಪೂರ್ವ ಜಪ್ತಿ ಕೋರಿರುವ ಅರ್ಜಿಯನ್ನು ಪುರಸ್ಕರಿಸುವುದು ಅವಶ್ಯಕ ಮತ್ತು ಸೂಕ್ತವೆಂದು ಅಭಿಪ್ರಾಯಪಡುತ್ತಾ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲೆ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ಮತ್ತು 103 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಓ/139/ಸಿ.ಎಂ.ಎನ್/2010 ದಿನಾಂಕ: 17–02–2011ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಬಿ.ಸಿ. ಸತೀಶ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಆದ ನಾನು 9ನೇ ಪ್ರತಿವಾದಿ ಮತ್ತು ಆತನ ತಾಯಿ ಶ್ರೀಮತಿ ಸದಾರಾಮ ಚಡಗರ್‌ರವರುಗಳ ಜಂಟಿ ಹೆಸರಿನಲ್ಲಿರುವ ಈ ಕೆಳಗಿನ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯಲ್ಲಿ 9ನೇ ಪ್ರತಿವಾದಿಗೆ ಸೀಮಿತವಾದಂತೆ ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಆದೇಶ ಹೊರಡಿಸಿರುತ್ತೇನೆ. 9ನೇ ಪ್ರತಿವಾದಿಯು ಒಂದು ವೇಳೆ ಈ ಜಪ್ತಿ ಪೂರ್ವ ಆದೇಶದಲ್ಲಿ ತಿಳಿಸಿರುವ, ಆದೇಶದಿಂದ ಮುಕ್ತ ಮಾಡಿಸಿಕೊಳ್ಳಲು ಇಚ್ಛಿಸಿದಲ್ಲಿ ದಾವಾ ಅರ್ಜಿಯಲ್ಲಿ ವಾದಿಯು ಕ್ಲೈಂ ಮಾಡಿರುವ ಮೊತ್ತ ರೂ. 4,39,26,119/– (ರೂ. ನಾಲ್ಕು ಕೋಟಿ ಮೂವತ್ತೊಂಬತ್ತು ಲಕ್ಷ ಇಪ್ಪತ್ತಾರು ಸಾವಿರದ ನೂರ ಹತ್ತೊಂಬತ್ತು ಮಾತ್ರ)ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ಈ ಆದೇಶ ಹೊರಡಿಸಿದ 30

ದಿವಸಗಳ ಒಳಗಾಗಿ ಜಮಾ ಮಾಡಿ ಅಧಿಕೃತ ಚಲನ್/ರಶೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಿದಲ್ಲಿ ಈ ಆದೇಶದಲ್ಲಿ ತಿಳಿಸಿರುವ ಷೆಡ್ಯೂಲ್ ಸ್ವತ್ತನ್ನು ಮುಕ್ತಗೊಳಿಸುವ ಷರತ್ತಿಗೊಳಪಟ್ಟಿರುತ್ತದೆ.

ಒಂದು ವೇಳೆ 9ನೇ ಪ್ರತಿವಾದಿಯು ಈ ಮೇಲೆ ತಿಳಿಸಿರುವಂತೆ ಈ ಆದೇಶ ಹೊರಡಿಸಿದ 30 ದಿವಸಗಳ ಒಳಗಾಗಿ ಅವಶ್ಯವಿರುವ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಈ ಆದೇಶ ಪೂರ್ವ ಷರತ್ತು ಜಪ್ತಿ ಆದೇಶವನ್ನು ದಾವ ಇತ್ಯರ್ಥವಾಗುವವರೆಗೆ ಸ್ಥಿರೀಕರಿಸಲಾಗುವುದು.

ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ಯಾವುದೇ ವ್ಯಕ್ತಿಗಳಿಗೆ ಈ ಆಸ್ತಿ ಪೂರ್ವ ಜಪ್ತಿ ಆದೇಶವು ಒಳಪಟ್ಟಿರುತ್ತದೆ.

**"ಷೆಡ್ಯೂಲ್ ಸ್ವತ್ತಿನ ವಿವರಗಳು"**

All that piece and parcel of the vacant property bearing No. 3D, situated at Hulimavu Village, Begur Hobli, Bangalore South Taluk (now under BBMP limits) measuring East to West Southern side 75 ft. Northern side 69 ft. and North to South towards Eastern side 90 ft. and Western side 75 ft. in total 5940 sft. and bounded on

| | | |
|---|---|---|
| East by | : | Property belongs to Ramachandrappa |
| West by | : | Road |
| North by | : | Road |
| South by | : | Road |

ಈ ಆದೇಶವು 9ನೇ ಪ್ರತಿವಾದಿಯ ಹಕ್ಕು ಮತ್ತು ಬಾಧ್ಯತೆಗಳಿಗೆ ಮಾತ್ರ ಸೀಮಿತವಾಗಿದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮೊಹರು ನಿಶೆಯೊಂದಿಗೆ ಈ ದಿನ ದಿನಾಂಕ: 23–09–2013ರಂದು ಹೊರಡಿಸಿರುತ್ತೇನೆ.

**ಬಿ.ಸಿ. ಸತೀಶ್,**
ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು

**PR 2401**
**SC 10**

## ಕಂದಾಯ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಕಂಇ 198 ಎಲ್‌ಆರ್‌ಎಂ 2012, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್, 2013

ಕೊಡಗು ಜಿಲ್ಲೆ, ವಿರಾಜಪೇಟೆ ತಾಲ್ಲೂಕು, ಪೊನ್ನಂಪೇಟೆ ಹೋಬಳಿಯ ಗೋಣಿಕೊಪ್ಪ ಕೊಡವ ಸಮಾಜ, ಇವರಿಗೆ ಕೈಕೇರಿ ಗ್ರಾಮದ ಸ.ನಂ. 107ರಲ್ಲಿ 2–70 ಎಕರೆ ಸ.ನಂ. 108ರಲ್ಲಿ 1–60 ಎಕರೆ ಹಾಗೂ ಸ.ನಂ. 110ರಲ್ಲಿ 0–70 ಎಕರೆ ಹೀಗೆ ಒಟ್ಟು 5.00 ಎಕರೆ ಜಮೀನನ್ನು ಪತ್ರ ಸಂಖ್ಯೆ: ಭೂಸುಧಾರಣೆ/29/2011–12, ದಿನಾಂಕ: 23–05–2012ರಲ್ಲಿ ಕಲ್ಯಾಣ ಮಂಟಪ, ಸಮುದಾಯ ಭವನ ಹಾಗೂ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವ ಉದ್ದೇಶಕ್ಕಾಗಿ ಖರೀದಿಸಲು ಅನುಮತಿ ನೀಡುವಂತೆ ಶಿಫಾರಸ್ಸು ಮಾಡಿ, ಜಿಲ್ಲಾಧಿಕಾರಿ, ಕೊಡಗು ಇವರು ಪ್ರಸ್ತಾವನೆ ಸಲ್ಲಿಸಿದ್ದರು. ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 109(1) ಮತ್ತು ಕರ್ನಾಟಕ ಭೂ ಸುಧಾರಣಾ ನಿಯಮಗಳು 1974ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿರುವುದರಿಂದ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ, ಕಲಂ 109 (1ಎ)ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ:–

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3) ಈ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.

4) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳು/ಕಾಯ್ದೆಗಳು ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

5) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.

6) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.

7) ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.

ಈ ಮೇಲಿನ ಯಾವುದೇ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ದಾಕ್ಷಾಯಣಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

**P.R. 2356**

**SC 20**

## ಕಂದಾಯ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಕಂಇ 110 ಎಲ್‌ಆರ್‌ಎಂ 2012, ಬೆಂಗಳೂರು, ದಿನಾಂಕ: 19ನೇ ಅಕ್ಟೋಬರ್, 2013

ಮೆ॥ ನಿಟ್ಟೆ ಎಜುಕೇಷನ್ ಟ್ರಸ್ಟ್ (ರಿ), ಯೂನಿವರ್ಸಿಟಿ ಎನ್‌ಕ್ಲೈವ್ ಮೆಡಿಕಲ್ ಸೈನ್ಸ್ ಕಾಂಪ್ಲೆಕ್ಸ್, ದೇರಳಕಟ್ಟೆ ಮಂಗಳೂರು ಇವರಿಗೆ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಕೃಷ್ಣರಾಜಪುರ ಗ್ರಾಮದ ಸ.ನಂ. 16ರಲ್ಲಿ 5–02 ಎ/ಗುಂ ಹಾಗೂ ಸ.ನಂ. 6/3 ರಲ್ಲಿ 0–09 ಗುಂಟೆ, ಒಟ್ಟು 05 ಎಕರೆ 11 ಗುಂಟೆ ಜಮೀನನ್ನು ಪತ್ರ ಸಂಖ್ಯೆ: ಎಲ್‌ಆರ್‌ಎಫ್ (109) (ಎನ್.ಎ.) ಸಿ.ಆರ್./9/2012–13, ದಿನಾಂಕ: 10–12–2012ರಲ್ಲಿ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಅನುಮತಿ ನೀಡುವಂತೆ ಶಿಫಾರಸ್ಸು ಮಾಡಿ, ಜಿಲ್ಲಾಧಿಕಾರಿ, ಬೆಂಗಳೂರು ನಗರ ಇವರು ಪ್ರಸ್ತಾವನೆ ಸಲ್ಲಿಸಿದ್ದರು. ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 109(1) ಮತ್ತು ಕರ್ನಾಟಕ ಭೂ ಸುಧಾರಣಾ ನಿಯಮಗಳು 1974ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿರುವುದರಿಂದ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ, ಕಲಂ 109 (1ಎ)ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ:–

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಈ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ, ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ, ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3. ಈ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.

4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳು/ಕಾಯ್ದೆಗಳು ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.

6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.

7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.

ಈ ಮೇಲಿನ ಯಾವುದೇ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ದಾಕ್ಷಾಯಣಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

**P.R. 2357**

**SC 20**

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೋಲಾರ ಜಿಲ್ಲೆ, ಕೋಲಾರ ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂಖ್ಯೆ: ಇಎಕ್ಸ್‌ಇ/4/ಡಿಟಿಸಿಆರ್/134/2009–10, ದಿನಾಂಕ: 06–05–2013**

ಉಪಸ್ಥಿತರು: **ಹೆಚ್.ಬಿ. ಬಾಲಗಂಗಾಧರ,**

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೋಲಾರ ಜಿಲ್ಲೆ, ಕೋಲಾರ

**ಫಿರ್ಯಾದುದಾರರು :**
ಅಬಕಾರಿ ನಿರೀಕ್ಷಕರು–1,
ರಾಜ್ಯ ವಿಚಕ್ಷಣ ದಳ, ಬೆಂಗಳೂರು

**ವಿರುದ್ಧ**

**ಅರ್ಜಿದಾರರು :**
ಎ.ಎನ್. ರವಿಕುಮಾರ್ ಬಿನ್ ನಂದೀಶಪ್ಪ, ಅಪ್ಪಸಂದ್ರ ಗ್ರಾಮ, ನರಸಾಪುರ ಅಂಚೆ, ಕೋಲಾರ ತಾಲ್ಲೂಕು

**ಆರೋಪಿಗಳು :**

1. ಪಾಪಣ್ಣ ಬಿನ್ ಲೇಟ್ ಅಪ್ಪಾಜಪ್ಪ, ವಯಸ್ಸು ಸುಮಾರು 75 ವರ್ಷ
   ವಾಸ : ಸರ್ವೆ ನಂ. 195, ಶಿವಾರಪಟ್ಟಣ, ಮಿಂಡಹಳ್ಳಿ ಗ್ರಾಮ ಪಂಚಾಯ್ತಿ, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ
2. ಶ್ರೀನಿವಾಸ್ ಬಿನ್ ಪಾಪಣ್ಣ, ವಯಸ್ಸು 30 ವರ್ಷ
   ವಾಸ : ಸರ್ವೆ ನಂ. 195, ಶಿವಾರಪಟ್ಟಣ, ಮಿಂಡಹಳ್ಳಿ ಗ್ರಾಮ ಪಂಚಾಯ್ತಿ, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ
3. ವರದರಾಜು, ಗೂಗಟನಹಳ್ಳಿ, ಹೊಸಕೋಟೆ ತಾಲ್ಲೂಕು

**ಪ್ರಸ್ತಾವನೆ:–**

ದಿನಾಂಕ: 08–09–2009 ರಂದು ಬೆಳಿಗ್ಗೆ 6–00 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು–1, ರಾಜ್ಯ ವಿಚಕ್ಷಣ ದಳ, ಬೆಂಗಳೂರು ಇವರು ಬಾತ್ಮಿಯ ಆಧಾರದ ಮೇರೆಗೆ ಕೋಲಾರ ಜಿಲ್ಲೆ, ಮಾಲೂರು ತಾಲ್ಲೂಕು, ಮಿಂಡಹಳ್ಳಿ ಗ್ರಾಮ ಪಂಚಾಯ್ತಿಯ ಶಿವಾರಪಟ್ಟಣದ ಸರ್ವೆ ನಂ–195 ರಲ್ಲಿರುವ ಪಾಪಣ್ಣ ಎಂಬುವರಿಗೆ ಸೇರಿದೆ ಎನ್ನಲಾದ ತೋಟದಲ್ಲಿರುವ ರೇಷ್ಮೆ ಹುಳು ಸಾಕುವ ವಾಸದ ಹೆಂಚಿನ ಮನೆಯೊಳಗೆ ಮತ್ತು ಸದರಿ ಮನೆಯ ಸುತ್ತಮುತ್ತಲಿನಲ್ಲಿ ಅಕ್ರಮವಾಗಿ 5 ನೀಲಿ ಬಣ್ಣದ 220 ಲೀಟರ್ ಸಾಮರ್ಥ್ಯದ ಪ್ಲಾಸ್ಟಿಕ್ ಬ್ಯಾರಲ್‌ಗಳಲ್ಲಿ ತಲಾ 220 ಲೀಟರ್‌ನಂತೆ ಒಟ್ಟು 1100 ಲೀಟರ್ ಮದ್ಯಸಾರವನ್ನು ಟಾಟಾ 407 ವಾಹನ ನೋಂದಣಿ ಸಂಖ್ಯೆ: ಕೆಎ–03 ಎ–6870ರಲ್ಲಿ ಹಾಗೂ ಮನೆಯಲ್ಲಿ ಅಕ್ರಮವಾಗಿ 10 ನೀಲಿ ಬಣ್ಣದ 220 ಲೀಟರ್ ಸಾಮರ್ಥ್ಯದ ಪ್ಲಾಸ್ಟಿಕ್ ಬ್ಯಾರಲ್‌ಗಳಲ್ಲಿ ತಲಾ 220 ಲೀಟರ್‌ನಂತೆ ಒಟ್ಟು 2200 ಲೀಟರ್ ಮದ್ಯಸಾರವನ್ನು ಹೀಗೆ ಒಟ್ಟು 3300 ಲೀಟರ್ ಮದ್ಯಸಾರ ಹಾಗೂ ಸದರಿ ಪ್ರಮಾಣದ ಮದ್ಯಸಾರದಿಂದ ಅಕ್ರಮವಾಗಿ ಮದ್ಯವನ್ನು ತಯಾರಿಸಲು ಒಂದು ಕೈಚಲಿತ ಯಂತ್ರ, ಒಂದು ಪ್ಲಾಸ್ಟಿಕ್ ಚೀಲದಲ್ಲಿ 25 ಕೆ.ಜಿ. Old monk very old vatted special rum, Mcdowell No.1 celebration matured XXX rum, Golconda brandy ಯ ಮದ್ಯದ ಬಾಟಲುಗಳ ಬಾಯಿಗೆ ಹಾಕುವ ತಗಡಿನ ಬಿರಡೆಗಳು, 750 ಮಿಲಿ ಬಾಟಲುಗಳಿಗೆ ಅಂಟಿಸುವ Old monk very old vatted special rum ನ 15 ಬಂಡಲ್‌ಗಳಲ್ಲಿ ತಲಾ 500 ನಂತೆ 7000 Mcdowell No.1 celebration matured XXX rum, ನ 19 ಬಂಡಲ್‌ಗಳಲ್ಲಿ ತಲಾ 500 ನಂತೆ 9500 Golconda brandy ಯ 750 ಮಿಲಿಯ 50 ಲೇಬಲ್‌ಗಳು ಹೀಗೆ ಒಟ್ಟು 16550 ಲೇಬಲ್‌ಗಳು (ಲೇಬಲ್‌ಗಳ ಮೇಲೆ "For defence services only canteen servies" ಎಂದು ನಮೂದಿಸಿರುತ್ತದೆ, ಒಂದು ಪ್ಲಾಸ್ಟಿಕ್ ಚೀಲದಲ್ಲಿ 750 ಮಿಲಿಯ 700 ಖಾಲಿ ಪ್ಲಾಸ್ಟಿಕ್ ಬಾಟಲುಗಳು, ಮೂರು ಕೆ.ಜಿ.ಯ ಕೆರಾಮಲ್ ಬಾಟಲ್‌ಗಳು, ಐದು ನೀಲಿ ಬಣ್ಣದ 220 ಲೀಟರ್ ಸಾಮರ್ಥ್ಯದ ಖಾಲಿ ಪ್ಲಾಸ್ಟಿಕ್ ಬ್ಯಾರಲ್‌ಗಳು.

ಇಂತಹ ಅಕ್ರಮ ಕೃತ್ಯವನ್ನು ಪತ್ತೆ ಮಾಡಿ ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, 13, 14 ರಂತೆ ಕಾನೂನು ಉಲ್ಲಂಘನೆಯಾಗಿದ್ದು, ಇದೇ ಕಾಯ್ದೆಯ ಕಲಂ 32, 38(ಎ) ಮತ್ತು 43 ರಂತೆ ಶಿಕ್ಷಾರ್ಹ ಅಪರಾಧವಾಗಿರುವುದರಿಂದ, ಒಂದನೇ ಆರೋಪಿಯಾದ ಪಾಪಣ್ಣ ಬಿನ್ ಲೇಟ್ ಅಪ್ಪಾಜಪ್ಪ ಅವರನ್ನು ಸ್ಥಳದಲ್ಲಿಯೇ ಬಂಧಿಸಿ, ಅಕ್ರಮವಾಗಿ ಮದ್ಯವನ್ನು ತಯಾರಿಸಲು ಸಂಗ್ರಹಿಸಿದ್ದ 3300 ಲೀಟರ್ ಮದ್ಯಸಾರ ಮತ್ತು ಮದ್ಯವನ್ನು ತಯಾರಿಸಲು ಸಂಗ್ರಹಿಸಿದ್ದ ಕೈಚಲಿತ ಯಂತ್ರ, ತಯಾರಿಸಿದ ಮದ್ಯ ಸಾಗಾಣೆ ಮಾಡಲು ಉಪಯೋಗಿಸಲು ಟಾಟಾ 407 ವಾಹನ ನೋಂದಣಿ ಸಂಖ್ಯೆ: ಕೆಎ–03 ಎ–6870 ರನ್ನು ಮತ್ತು ಇತರೆ ಉಪಕರಣವನ್ನು ಮಹಜರ್ ಮೂಲಕ ಜಪ್ತಿಪಡಿಸಿಕೊಂಡು, ಸದರಿ ಆರೋಪಿಗಳ ವಿರುದ್ಧ ಪ್ರ.ಮಾ.ವ. ಸಂಖ್ಯೆ: 14/2009–10 ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡಿರುತ್ತಾರೆ. ಸದರಿ ಪ್ರಕರಣದಲ್ಲಿ ಜಪ್ತಿ ಮಾಡಿರುವ ಪ್ರತಿಯೊಂದು ಪ್ಲಾಸ್ಟಿಕ್ ಬ್ಯಾರಲ್‌ಗಳಿಂದ 180 ಮಿಲಿಯ 2 ಬಾಟಲ್‌ಗಳಂತೆ ಒಟ್ಟು 30 ಬಾಟಲ್‌ಗಳನ್ನು ಮಾದರಿಯಾಗಿ ತೆಗೆಯಲಾಗಿದ್ದು, ಇವುಗಳಲ್ಲಿ 15 ಬಾಟಲ್ ಸೆಟ್‌ಗಳನ್ನು ರಾಸಾಯನಿಕ ಪರೀಕ್ಷೆಗೆ ಕಳುಹಿಸಲು ಇಲಾಖೆ ಸೀಲ್‌ಗಳಿಂದ ಮುದ್ರೆ ಮಾಡಿಕೊಂಡು ಇನ್ನುಳಿದ 15 ಬಾಟಲುಗಳ ಇನ್ನೊಂದು ಸೆಟ್‌ನ್ನು ಇಲಾಖೆ ಸೀಲ್‌ಗಳಿಂದ ಮುದ್ರೆ ಮಾಡಿಕೊಂಡು ಮುಂದಿನ ತನಿಖೆಗೆ ತನಿಖಾಧಿಕಾರಿಗಳ ವಶದಲ್ಲಿಟ್ಟುಕೊಳ್ಳಲು ವರದಿ ಮಾಡಿ, ನಿಯಮಗಳಂತೆ ಸ್ಥಳದಲ್ಲಿಯೇ ಹನುಮಂತಪ್ಪ ಮತ್ತು ಪರಶುರಾಮ ಎಂಬುವರ ಸಾಕ್ಷಿಯನ್ನೊಳಗೊಂಡಂತೆ ದಸ್ತಗಿರಿ ಮೆಮೋ ಅನ್ನು ತಯಾರಿಸಿಕೊಂಡು ಆರೋಪಿಯಾದ ಪಾಪಣ್ಣ ಅವರಿಂದ ಅವರ ಪರವಾಗಿ ಯಾರಾದರು ವಕಾಲತ್ತು ವಹಿಸಿಕೊಳ್ಳಬಯಸುವುದಾದರೆ ಅವರ ಹೆಸರು ಮತ್ತು ವಿಳಾಸವನ್ನು ತಿಳಿಸಲು ವಿಚಾರಿಸಲಾಗಿ ಅದಕ್ಕೆ ಹರೀಶ್ ತಂದೆ ತಿಮ್ಮಯ್ಯ, ವಕೀಲರು ಅವರ ಮೊಬೈಲ್ ಸಂಖ್ಯೆ: 9880247490 ಎಂದು ತಿಳಿದುಕೊಂಡು ಆರೋಪಿಯನ್ನು ಬಂಧಿಸಿ ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಾಲೂರು ಅವರ ಬಂಧನಕ್ಕೊಳಪಡಿಸುವುದಾಗಿ ಸದರಿ ವಕೀಲರಿಗೆ ತಿಳಿಸಲಾಗಿರುವುದಾಗಿ ಅಬಕಾರಿ ನಿರೀಕ್ಷಕರು ವರದಿ ಮಾಡಿರುತ್ತಾರೆ. ಸದರಿ ಪ್ರಕರಣದಲ್ಲಿ ಜಪ್ತಿ ಮಾಡಿರುವ ಮದ್ಯಸಾರದಿಂದ ತೆಗೆದಿರುವ ಮಾದರಿಗಳನ್ನು ರಾಸಾಯನಿಕ ವಿಶ್ಲೇಷಕರಿಂದ ವಿಶ್ಲೇಷಿಸಿದಾಗ, ಸದರಿ ಮಾದರಿಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡುಬಂದಿದ್ದು, ಅವು ಮಾನವ ಸೇವನೆಗೆ ಬಳಸಬಹುದಾದ ಮದ್ಯವನ್ನು ತಯಾರಿಸಲು ಯೋಗ್ಯವಾಗಿರುವುದಾಗಿ

ದಿನಾಂಕ: 30–09–2009ರ ರಾಸಾಯನಿಕ ವಿಶ್ಲೇಷ ವರದಿಯಲ್ಲಿ ವರದಿ ಮಾಡಲಾಗಿರುತ್ತೆ. ಹಾಗೆಯೇ ಸದರಿ ಪ್ರಕರಣದಲ್ಲಿ ಜಪ್ತಿ ಮಾಡಿರುವ ಟಾಟಾ 407 ನೋಂದಣಿ ಸಂಖ್ಯೆ: ಕೆಎ–03 ಎ–6870ರನ್ನು ಹೊರತುಪಡಿಸಿ ಎಲ್ಲಾ ಪ್ರಮಾಣದ ಮದ್ಯಸಾರ ಮತ್ತು ಅಕ್ರಮವಾಗಿ ನಕಲಿ ಮದ್ಯ ತಯಾರಿಕೆಗೆ ಉಪಯೋಗಿಸುವ ಇತರೆ ಪರಿಕರಣಗಳನ್ನು ದಿ: 07–12–2009 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ಕಲಂ 43(ಎ) ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿರುತ್ತೆ, ಹೀಗೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವ ಮದ್ಯಸಾರವನ್ನು ನಿಯಮಾನುಸಾರ ನಾಶ ಮಾಡಿಸಲು ಹಾಗೂ ಇತರೆ ವಸ್ತುಗಳನ್ನು ನಿಯಮಗಳನ್ವಯ ಬಹಿರಂಗ ಹರಾಜಿನ ಮೂಲಕ ವಿಲೇ ಮಾಡಿ ಬಂದ ಹಣವನ್ನು ಸರ್ಕಾರಕ್ಕೆ ಪಾವತಿಸಲು ಈ ಪ್ರಾಧಿಕಾರ ದಿ: 26–05–2010ರ ಆದೇಶದಲ್ಲಿ ಆದೇಶಿಸಲಾಗಿರುತ್ತೆ.

ಹೀಗೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವ 3300 ಲೀಟರ್ ಮದ್ಯಸಾರವನ್ನು ದಿನಾಂಕ: 04–06–2010ರಂದು ಮಹಜರ್ ಮತ್ತು ವಿಡಿಯೋಗ್ರಾಫಿ ಚಿತ್ರಗಳ ಮೂಲಕ ನಿಯಮಗಳನ್ವಯ ನಾಶಪಡಿಸಿರುವುದಾಗಿ ಅಬಕಾರಿ ನಿರೀಕ್ಷಕರು, ಮಾಲೂರು ವಲಯ ಅವರ ದಿನಾಂಕ: 16–06–2010ರ ವರದಿಯಲ್ಲಿ ವರದಿ ಮಾಡಿರುತ್ತಾರೆ.

ಸದರಿ ಪ್ರಕರಣದಲ್ಲಿ ಜಪ್ತಿ ಮಾಡಿರುವ ಟಾಟಾ 407 ನೋಂದಣಿ ಸಂಖ್ಯೆ: ಕೆಎ–03 ಎ–6870ರ ನೋಂದಾಯಿತ ಮಾಲೀಕರಾದ ಎನ್.ರವಿಕುಮಾರ್ ಬಿನ್ ನಂದೀಶಪ್ಪ, ಅಪ್ಪಸಂದ್ರ ಗ್ರಾಮ, ನರಸಾಪುರ ಹೋಬಳಿ, ಕೋಲಾರ ತಾಲ್ಲೂಕು ಅವರು ದಿನಾಂಕ: 27–09–2010ರಲ್ಲಿ ಈ ಪ್ರಾಧಿಕಾರಕ್ಕೆ ವಕಾಲತ್ತು ಸಲ್ಲಿಸಿದ್ದು, ಅವರ ಮಾಲೀಕತ್ವದ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೋಲಾರ ಅವರಿಂದ ದೃಢೀಕರಿಸಿಕೊಂಡು, ಕರ್ನಾಟಕ ಅಬಕಾರಿ ಕಾಯ್ದೆ 1965 ಕಲಂ 43(ಬಿ) ರಡಿಯಲ್ಲಿ ಈ ಪ್ರಾಧಿಕಾರದ ದಿನಾಂಕ: 07–12–2009ರ ಕಾರಣ ಕೇಳಿ ನೋಟೀಸಿನಲ್ಲಿ ಅವರ ವಾಹನವನ್ನು ಅಕ್ರಮವಾಗಿ ಮದ್ಯಸಾರವನ್ನು ಸಾಗಾಣಿಕೆ ಮಾಡಲು ಉಪಯೋಗಿಸಿರುವುದಕ್ಕೆ ಸದರಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂಬುದಕ್ಕೆ ಸಮಜಾಯಿಷಿ ಕೇಳಲಾಗಿದ್ದು ಅದಕ್ಕೆ ನೋಂದಾಣಿ ಮಾಲೀಕರಾದ ಎ.ಎನ್.ರವಿಕುಮಾರ್ ಅವರು ಅವರ ದಿನಾಂಕ: 30–12–2009ರ ಹೇಳಿಕೆಯಲ್ಲಿ ತುಮಕೂರು ಜಿಲ್ಲೆಯ ಶಿರಾದಲ್ಲಿ ವರ್ಕ್ಸ್‌ಶಾಪ್‌ನಲ್ಲಿ ಅವರ ವಾಹನವನ್ನು ರಿಪೇರಿಗೆ ಬಿಟ್ಟ ಸಮಯದಲ್ಲಿ ಅವರಿಗೆ ತಿಳಿಯದಂತೆ ಯಾರೋ ಅವರ ವಾಹನವನ್ನು ಮದ್ಯಸಾರವನ್ನು ಸಾಗಾಣಿಕೆ ಮಾಡಲು ದುರುಪಯೋಗಪಡಿಸಿಕೊಂಡಿದ್ದು, ಸದರಿ ವಾಹನದಿಂದ ಬರುವ ಆದಾಯದಿಂದಲೇ ಅವರ ಜೀವನ ನಡೆಸುತ್ತಿದ್ದು, ಅದನ್ನು ಅವರಿಗೆ ಬಿಡುಗಡೆ ಮಾಡಲು ಈ ಪ್ರಾಧಿಕಾರವನ್ನು ಕೋರಿರುತ್ತಾರೆ. ನೋಂದಣಿ ಮಾಲೀಕರಾದ ಎ.ಎನ್.ರವಿಕುಮಾರ್ ಅವರ ಮನವಿಯನ್ನು ಪರಿಗಣಿಸಿ ಜಪ್ತಿ ಮಾಡಿರುವ ವಾಹನದ ಮೌಲ್ಯಕ್ಕೆ ರೂ. 50,000/– (ರೂಪಾಯಿ ಐವತ್ತು ಸಾವಿರ ಮಾತ್ರ) ವಿಜಯ ಬ್ಯಾಂಕ್, ನರಸಾಪುರ ಶಾಖೆ ಅವರಿಂದ ಬ್ಯಾಂಕ್ ಗ್ಯಾರಂಟಿಯನ್ನು ಪಡೆದು ದಿ: 29–01–2010 ರ ಆದೇಶದಂತೆ ಕೆಲವು ನಿರ್ದಿಷ್ಟ ಷರತ್ತುಗಳನ್ನೊಳಗೊಂಡಂತೆ ಸದರಿ ವಾಹನದ ಅಂತಿಮ ವಿಲೇಯನ್ನು ಕಾಯ್ದಿರಿಸಿ ಅರ್ಜಿದಾರರ ಸುಪರ್ದಿಗೆ (Interim Custody) ತಾತ್ಕಾಲಿಕವಾಗಿ ಮಧ್ಯಂತರ ಅವಧಿಗೆ ಬಿಡುಗಡೆ ಮಾಡಲಾಗಿರುತ್ತೆ.

**ವಿಚಾರಣೆ:–**

ದಿನಾಂಕ: 30–07–2010 ರಂದು ಸದರಿ ಪ್ರಕರಣದ ಪತ್ತೆ ಅಧಿಕಾರಿಯಾದ (Detecting Official) ವೈ.ಭರತೇಶ್, ಅಬಕಾರಿ ನಿರೀಕ್ಷಕರು, ರಾಜ್ಯ ವಿಚಕ್ಷಣ ದಳ, ಬೆಂಗಳೂರು ಇವರು ಪ್ರಾಧಿಕಾರದ ಮುಂದೆ ಹಾಜರಾಗಿ ಅವರ ಹೇಳಿಕೆಗಳನ್ನು ಈ ಕೆಳಗಿನಂತೆ ಪ್ರಾಧಿಕಾರಕ್ಕೆ ಹೇಳಿರುತ್ತಾರೆ. ಪ್ರಾ.ಸ.1 ವೈ.ಭರತೇಶ್ ಅವರು "ನಾನು ನನ್ನ ಸಿಬ್ಬಂದಿಯೊಡನೆ ಕೋಲಾರ ಜಿಲ್ಲೆಯ, ಮಾಲೂರು ಟೌನ್‌ನಲ್ಲಿ ಸರ್ಕಾರಿ ವಾಹನದಲ್ಲಿ ಗಸ್ತು ಮಾಡುತ್ತಿದ್ದಾಗ, ಮಾಲೂರು ತಾಲ್ಲೂಕಿನ ಮಿಂಡಹಳ್ಳಿ ಗ್ರಾಮ ಪಂಚಾಯಿತ್ಯಿಯ ಶಿವಾರಪಟ್ಟಣದಲ್ಲಿರುವ ಪಾಪಣ್ಣ ಎಂಬುವರಿಗೆ ಸೇರಿದ್ದ ತೋಟದಲ್ಲಿರುವ ರೇಷ್ಮೆ ಹುಳು ಸಾಕುವ ಹೆಂಚಿನ ಮನೆಯಲ್ಲಿ ಮತ್ತು ಮನೆಯ ಮುಂದೆ ನಿಂತಿದ್ದ ಟಾಟಾ 407 ವಾಹನ ನೋಂದಣಿ ಸಂಖ್ಯೆ: ಕೆಎ–03 ಎ–6870 ರಲ್ಲಿ ಅಬಕಾರಿ ಅಕ್ರಮ ವಸ್ತುಗಳು ಸಂಗ್ರಹಿಸಿರುವ ಬಗ್ಗೆ ಬಾತ್ಮಿಯ ಆಧಾರದ ಮೇರೆಗೆ ನನ್ನ ಸಿಬ್ಬಂದಿಯೊಡನೆ ಹೋಗಿದ್ದು, ಮಾನ್ಯ ನ್ಯಾಯಾಲಯದ ಶೋಧನೆ ವಾರೆಂಟ್ ಪಡೆಯಲು ನನಗೆ ಕರ್ನಾಟಕ ಅಬಕಾರಿ ಕಾಯ್ದೆ 1965 ಕಲಂ 54 ರನ್ವಯ ವಿನಾಯಿತಿ ಇರುವುದರಿಂದ, ಸದರಿ ಕಲಂ ಪ್ರಕಾರ ವರದಿಯನ್ನು ತಯಾರಿಸಿಕೊಂಡು ಪಂಚರ ಸಹಿ ಪಡೆದು ಸದರಿ ಮನೆಯಲ್ಲಿ 3300 ಲೀಟರ್ ಮದ್ಯಸಾರ ಮತ್ತು ಸದರಿ ಪ್ರಮಾಣದ ಮದ್ಯಸಾರದಿಂದ ನಕಲಿ ಮದ್ಯವನ್ನು ತಯಾರಿಸಲು 3 ಕೆ.ಜಿ. ಕೆರಾಮಲ್ ಬಾಟಲ್‌ಗಳು ಮತ್ತು ಒಂದು ಕೈಚಾಲಿತ ಯಂತ್ರ ಮತ್ತು ಇತರೆ ಪರಿಕರಣಗಳನ್ನು ಪತ್ತೆ ಮಾಡಿ ಸದರಿ ವಸ್ತುಗಳನ್ನು ಹೊಂದಲು ಯಾವುದಾದರು ಪರವಾನಿಗೆ ಇದೆಯೇ ಎಂದು ಸ್ಥಳದಲ್ಲಿದ್ದ ವ್ಯಕ್ತಿ ಪಾಪಣ್ಣ ಅವರನ್ನು ವಿಚಾರಿಸಲಾಗಿ ಅದಕ್ಕೆ ಆತ ಯಾವುದೇ ಪರವಾನಿಗೆ ಇಲ್ಲವೆಂದು ತಿಳಿಸಿದ ಮೇರೆಗೆ, ಸದರಿ ಸಂಗ್ರಹಣೆಯ ಅಕ್ರಮ ಕೃತ್ಯವೆಂದು ಪರಿಗಣಿಸಿಕೊಂಡು ಎಲ್ಲಾ ಪ್ರಮಾಣ ಮದ್ಯಸಾರ ಮತ್ತು ಇತರೆ ವಸ್ತುಗಳನ್ನು ಪಂಚರ ಸಮಕ್ಷಮ ಜಪ್ತು ಮಾಡಿಕೊಂಡು ಪಾಪಣ್ಣ ಮತ್ತು ಇತರೆ 6 ಜನ ವ್ಯಕ್ತಿಗಳ ವಿರುದ್ಧ ಮೊಕದ್ದಮೆಯನ್ನು ದಾಖಲಿಸಿಕೊಂಡು ಜಪ್ತಿಪಡಿಸಿರುವ ಮದ್ಯಸಾರದಿಂದ 180 ಮಿಲಿ 30 ಬಾಟಲುಗಳನ್ನು ಮಾದರಿ ತೆಗೆಯಲಾಗಿದ್ದು, ಎಲ್ಲಾ ಬಾಟಲುಗಳ ಮುಚ್ಚಳಗಳಿಗೆ ಬಿಳಿ ಬಟ್ಟೆಗಳಿಂದ ಸುತ್ತಿ ಇಲಾಖೆಯ ಮುದ್ರೆಗಳಿಂದ ಸೀಲ್ ಮಾಡಲಾಗಿದ್ದು, 30 ಬಾಟಲುಗಳ ಮಾದರಿಗಳಲ್ಲಿ 15 ಬಾಟಲುಗಳ ಸೆಟ್‌ನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಇನ್ನುಳಿದ 15 ಬಾಟಲುಗಳ ಸೆಟ್‌ನ್ನು ತನಿಖಾಧಿಕಾರಿಗಳ ವಶದಲ್ಲಿಟ್ಟುಕೊಳ್ಳಲು ತೆಗೆಯಲಾಗಿದೆ ಎಂದು ತಿಳಿಸಿ, ಸ್ಥಳದಲ್ಲಿದ್ದ ಪಾಪಣ್ಣ ಆತನನ್ನು ಬಂಧಿಸಿ ಸದರಿ ವ್ಯಕ್ತಿಯನ್ನು ಮಾನ್ಯ ನ್ಯಾಯಾಲಯಕ್ಕೆ ಒಪ್ಪಿಸುವ ಮೊದಲು ಸದರಿ ವಿಷಯವನ್ನು ಅವರ ವಕೀಲರಾದ ಹರೀಶ್ (ಮೊಬೈಲ್ ನಂ. 9880247490) ಅವರಿಗೆ ತಿಳಿಸಲು ಮೆಮೋ ಸಾಕ್ಷಿಗಳನ್ನೊಳಗೊಂಡಂತೆ ದಸ್ತಗಿರಿ ಮೆಮೋ ತಯಾರಿಸಿಕೊಂಡು ನ್ಯಾಯಾಲಯದ ಬಂಧನಕ್ಕೊಪ್ಪಿಸಿ ನಂತರ ಪ್ರಕರಣದಲ್ಲಿ ಜಪ್ತಿ ಮಾಡಿರುವ ವಾಹನ ಮತ್ತು ಎಲ್ಲಾ ಪ್ರಮಾಣದ ಮದ್ಯಸಾರ ಮತ್ತು ಇತರೆ ಪರಿಕರಣಗಳನ್ನು ಮುಂದಿನ ತನಿಖೆಗೆ ಹಸ್ತಾಂತರಿಸಲು ಈ ಪ್ರಾಧಿಕಾರದಿಂದ ದಿನಾಂಕ: 08–09–2009 ರಂದು ಅನುಮತಿ ಪಡೆಯಲಾಗಿದೆ ಎಂದು ವಿಚಾರಣೆಯಲ್ಲಿ ಈ ಪ್ರಾಧಿಕಾರಕ್ಕೆ ತಿಳಿಸಿರುತ್ತೆ"

ಪ್ರಕರಣದಲ್ಲಿ ದಾಖಲಿಸಿರುವ ಪ್ರ.ಮಾ.ವ ವನ್ನು ನಿಶಾನೆ ಪಿ–1, ಮಹಜರ್ ಪ್ರತಿಯನ್ನು ನಿಶಾನೆ ಪಿ–2 ಸ್ವತ್ತಿನ ಪಟ್ಟಿಯನ್ನು ನಿಶಾನೆ ಪಿ–3, ರಾಸಾಯನಿಕ ವರದಿಯ ಪ್ರತಿಯನ್ನು ನಿಶಾನೆ ಪಿ–4 ಹಾಗೂ ವಾಹನ ನೋಂದಾಯಿತ ಮಾಲೀಕತ್ವದ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೋಲಾರ

ಅವರಿಂದ ಪಡೆದಿರುವ 'ಬಿ' ಎಕ್ಸ್‌ಟ್ರಾಕ್ಟ್ ಪ್ರತಿಯನ್ನು ನಿಶಾನೆ ಪಿ–5 ಎಂದು ಗುರುತಿಸಲಾಗಿರುತ್ತೆ ಹಾಗೂ ಪ್ರಕರಣದಲ್ಲಿ ಜಫ್ತು ಮಾಡಿರುವ ವಾಹನವನ್ನು ಎಂ.ಓ.ನಂ.1 ಎಂದು ಗುರುತಿಸಲಾಗಿರುತ್ತೆ.

**ಪಾಟಿ ಸವಾಲು:** ಅರ್ಜಿದಾರರ ವಕೀಲರಿಂದ ದಿನಾಂಕ: 17–06–2011ರಂದು ಪ್ರಾ.ಸ–1 ಅವರನ್ನು ವಿಚಾರಣೆಗೊಳಪಡಿಸಲಾಗಿದ್ದು ಅವರ ಹೇಳಿಕೆಗಳು ಹೀಗಿರುತ್ತವೆ. "ಪ್ರತಿ ತಿಂಗಳು ನಿಗಧಿತ ಪ್ರಕರಣಗಳನ್ನು ದಾಖಲಿಸಬೇಕೆಂದು ಇಲಾಖೆಯ ನಿಯಮಗಳಿರುತ್ತದೆ ಎಂದರೆ ಸರಿಯಲ್ಲ, ಸದರಿ ಪಾಪಣ್ಣನಿಗೆ ಸೇರಿದೆ ಎನ್ನಲಾದ ರೇಷ್ಮೆಹುಳು ಸಾಗಾಣಿಕೆ ಮನೆಗೆ ಸಂಬಂಧಿಸಿದಂತೆ ಯಾವುದೇ ದಾಖಲೆಗಳನ್ನು ಹಾಜರುಪಡಿಸಿರುವುದಿಲ್ಲ. ಕೃತ್ಯ ನಡೆದ ಸ್ಥಳವು ಸದರಿ ಪಾಪಣ್ಣನವರಿಗೆ ಸೇರಿದೆಯೇ ಅಥವಾ ಇಲ್ಲವೇ ಎಂಬುದನ್ನು ಆ ಸಂದರ್ಭದಲ್ಲಿ ನನಗೆ ಖಚಿತಪಡಿಸಿಕೊಳ್ಳಲಾಗಲಿಲ್ಲ. ಸದರಿ ಪ್ರಕರಣದಲ್ಲಿ ನಾನು ಮುಂದಿನ ತನಿಖೆ ಕೈಗೊಂಡಿಲ್ಲ ತನಿಖಾಧಿಕಾರಿಗಳು ಈ ಪ್ರಕರಣದ ಬಗ್ಗೆ ಇಲ್ಲಿಯವರೆಗೆ ಯಾವುದೇ ತನಿಖೆ ನಡೆಸಿಲ್ಲ. ಯಾವುದೇ ಸ್ಥಳ ಶೋಧಿಸಲು ಅಬಕಾರಿ ಅಧಿಕಾರಿಗಳಿಗೆ ಅಕ್ರಮಕ್ಕೆ ಸಂಬಂಧಿಸಿದಂತೆ ನ್ಯಾಯಾಲಯದಿಂದ ಶೋಧನಾ ವಾರೆಂಟ್ ಪಡೆಯಲು ಅತ್ಯವಶ್ಯಕವಾಗಿರುವುದಿಲ್ಲ. ಆ ಸ್ಥಳದಲ್ಲಿ ವಾಹನ ಇರಲಿಲ್ಲ ಎಂದರೆ ಸರಿಯಲ್ಲ, ವಾಹನ ಮತ್ತು ಮದ್ಯಸಾರ ಜಫ್ತು ಪಡಿಸಿಲ್ಲ ಎಂದರೆ ಸರಿಯಲ್ಲ. ಸ್ಥಳದಲ್ಲಿ ಯಾವುದೇ ಪಂಚನಾಮ ಜರುಗಿಸಿಲ್ಲ ಎಂದರೆ ಸರಿಯಲ್ಲ, ಅಂಕಿ–ಅಂಶಗಳಿಗೋಸ್ಕರ ತಾವು ಮೊಕದ್ದಮೆಯನ್ನು ದಾಖಲಿಸಿರುತ್ತೀರಿ ಎಂಬುವುದು ಸರಿಯಲ್ಲ. ಸದರಿ ವಾಹನವನ್ನು ಬಾಡಿಗೆಗೆ ಬಿಡಲಾಗಿದೆ ಎಂಬುವುದರ ಬಗ್ಗೆ ನನಗೆ ಮಾಹಿತಿ ಇಲ್ಲ, ಸದರಿ ವಾಹನದಲ್ಲಿ ಅಕ್ರಮವಾಗಿ ಯಾವುದೇ ಮದ್ಯವನ್ನು ಸಾಗಾಣಿಕೆ ಮಾಡುತ್ತಿರಲಿಲ್ಲ ಎಂದರೆ ಸರಿಯಲ್ಲ. ಸದರಿ ವಾಹನದಲ್ಲಿ ಯಾವುದೇ ಮದ್ಯಸಾರ, ವಸ್ತುಗಳು ಸಿಕ್ಕಿರುವುದಿಲ್ಲ ಎಂದರೆ ಸರಿಯಲ್ಲ, ಸದರಿ ವಾಹನವನ್ನು ಯಾವುದೇ ಕಾನೂನು ಬಾಹಿರ ಕೃತ್ಯಗಳಿಗೆ ಉಪಯೋಗಿಸಿಲ್ಲ ಎಂದರೆ ಸರಿಯಲ್ಲ, ಸದರಿ ಪರಿಕರಣಗಳನ್ನು ಯಾರಿಗೆ ಸೇರಿದೆ ಎಂದು ಕೇಳಲಾಗಿ ಶ್ರೀನಿವಾಸ ಬಿನ್ ಪಾಪಣ್ಣನವರಿಗೆ ಸೇರಿರುತ್ತದೆ ಎಂದು ಪಾಪಣ್ಣ ಹೇಳಿಕೆ ನೀಡಿಲ್ಲ ಎಂದರೆ ಸರಿಯಲ್ಲ, ಸುಳ್ಳು ಪ್ರ.ಮಾ.ವ.ವನ್ನು ಸಲ್ಲಿಸಿರುತ್ತೇನೆಂದರೆ ಸರಿಯಲ್ಲ" ಎಂದು ಈ ಪ್ರಾಧಿಕಾರದ ಮುಂದೆ ಪಾಟಿ ಸವಾಲ್ ಆಗಿರುತ್ತದೆ.

**ಪ್ರಾ.ಸಾ–2 :** ಸರ್ಕಾರದ ಸಹಾಯಕ ಅಭಿಯೋಜಕ ನಿರ್ದೇಶಕರಿಂದ ದಿನಾಂಕ: 06–09–2011 ರಂದು ಪ್ರಾಸಾ – 2 ಹನುಮಂತಪ್ಪ ಬಿನ್ ತಿಮ್ಮಣ್ಣ ಮುಖ್ಯ ವಿಚಾರಣೆ ನಡೆಸಿದಾಗ ಮಹಜರ್ ಸಾಕ್ಷಿದಾರರು ಸದರಿ ವಿಚಾರಣೆಯಲ್ಲಿ ಪ್ರತಿಕೂಲ ಸಾಕ್ಷಿ ನುಡಿದಿರುತ್ತಾರೆ.

**ಪ್ರಾ.ಸಾ–3 : ಮುಖ್ಯ ವಿಚಾರಣೆ, ಸಹಾಯಕ ಅಭಿಯೋಜಕ ನಿರ್ದೇಶಕರಿಂದ ದಿನಾಂಕ: 08–06–2012.**

ಕೆ.ಎಂ.ನಾಗಭೂಷಣ್, ಅಬಕಾರಿ ರಕ್ಷಕರು, ರಾಜ್ಯ ವಿಚಕ್ಷಣ ದಳ, ಬೆಂಗಳೂರು ಇವರನ್ನು ಮುಖ್ಯ ವಿಚಾರಣೆ ಮಾಡಲಾಗಿದ್ದು, ಅವರು ದಿನಾಂಕ: 08–09–2009 ರಂದು ಬೆಳಿಗ್ಗೆ 6–00 ಗಂಟೆ ಸಮಯದಲ್ಲಿ ಅವರ ಮೇಲಾಧಿಕಾರಿಯಾದ ಪ್ರಾ.ಸಾ–1 ಅವರೊಂದಿಗೆ ಗಸ್ತು ಮಾಡುತ್ತಿದ್ದ ಸಮಯದಲ್ಲಿ ಮಾಲೂರು ತಾಲ್ಲೂಕು ಶಿವಾರಪಟ್ಟಣದ ಸರ್ವೆ ನಂ–195, ಪಾಪಣ್ಣ ಎಂಬುವರಿಗೆ ಸೇರಿದೆ ಎನ್ನಲಾದ ತೋಟದ ಮನೆಯ ಹತ್ತಿರ ನಕಲಿ ಮದ್ಯವನ್ನು ತಯಾರಿಸಲು ಸಂಗ್ರಹಿಸಿದ್ದ 1100 ಲೀಟರ್ ಮದ್ಯಸಾರ, ಟಾಟಾ 407 ವಾಹನ ನೋಂದಣಿ ಸಂಖ್ಯೆ: ಕೆಎ–03 ಎ–6870 ನ್ನು ಅಮಾನತ್ತು ಪಡಿಸಿ ಸ್ಥಳದಲ್ಲಿ ಮಹಜರ್ ಕ್ರಮ ಜರುಗಿಸಲಾಗಿದೆ ಎಂದು ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿದಿರುತ್ತಾರೆ.

**ಪಾಟಿ ಸವಾಲ್ : ಅರ್ಜಿದಾರರ ವಕೀಲರಿಂದ**

ದಿನಾಂಕ: 06–07–2012 ರಂದು ಪ್ರಾ.ಸಾ–3 ಅವರನ್ನು ವಿಚಾರಿಸಲಾಗಿದ್ದು, ಅದರಂತೆ ಅವರ ಹೇಳಿಕೆಗಳು ಈಗಿರುತ್ತವೆ "ದಿನಾಂಕ: 08–09–2009ರಂದು ಸರ್ವೆ ನಂ–195 ಪಾಪಣ್ಣನವರಿಗೆ ಸೇರಿದೆ ಎಂದು ಹೇಳಲು ನಾನು ಯಾವುದೇ ದಾಖಲೆಗಳನ್ನು ನೋಡಿರುವುದಿಲ್ಲ. ಮೇಲ್ಕಂಡ ಸರ್ವೆ ನಂಬರಿನಲ್ಲಿ ಮಹಜರ್ ಮಾಡಿದೆವು ಎಂದು ಹೇಳಲು ಆಗುವುದಿಲ್ಲ. ಏಕೆಂದರೆ ನಾನು ಯಾವುದೇ ದಾಖಲೆಗಳನ್ನು ನೋಡಿರುವುದಿಲ್ಲ. ನ್ಯಾಯಾಲಯಕ್ಕೆ ಅಮಾನತ್ತು ಮಹಜರ್‌ನ ಜೆರಾಕ್ಸ್ ಪ್ರತಿಯನ್ನು ನೀಡಿದ್ದೀರಿ ಎಂದರೆ ಹೌದು ಎಂದು ಸಾಕ್ಷಿ ನುಡಿದಿರುತ್ತಾರೆ. ಜೆರಾಕ್ಸ್ ಪ್ರತಿಯನ್ನು ನೀವೇ ಸೃಷ್ಟಿಸಿದ್ದೀರಿ ಎಂದರೆ ಸರಿಯಲ್ಲ, ಪ್ರಾ.ಸಾ–2 ರವರು ಅವರ ಮುಖ್ಯ ವಿಚಾರಣೆಯಲ್ಲಿ ಅಮಾನತ್ತು ಪಂಚನಾಮೆಗೆ ಕೆ.ಆರ್.ಸರ್ಕಲ್, ಬೆಂಗಳೂರು ಇಲ್ಲಿ ಸಹಿ ಮಾಡಿರುತ್ತಾರೆಂದು ನುಡಿದಿರುತ್ತಾರೆ ಎಂದರೆ ನನಗೆ ತಿಳಿದಿಲ್ಲ. ಆ ದಿನ ನಾನು ಯಾವುದೇ ಅಮಾನತ್ತು ಪಂಚನಾಮೆ ಬರೆದಿಲ್ಲ ಮತ್ತು ಅದಕ್ಕೆ ನಾನು ಸಹಿ ಮಾಡಿಲ್ಲ ಎನ್ನುವುದು ಸರಿಯಲ್ಲ, ಪಂಚನಾಮೆ ಅಮಾನತ್ತಿನಲ್ಲಿ ಸಹಿ ಮಾಡಿರುವ ಹನುಮಂತಪ್ಪ ಮತ್ತು ಪರಶುರಾಮ ಆ ದಿವಸ ಸ್ಥಳದಲ್ಲಿ ಹಾಜರಿಲ್ಲ ಮತ್ತು ಸಹಿ ಮಾಡಿಲ್ಲ ಎಂದು ಹೇಳಲು ಸರಿಯಲ್ಲ" ಎಂದು ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿದಿರುತ್ತಾರೆ.

**ಪ್ರಾ.ಸಾ–4 : ದಿನಾಂಕ: 08–06–2012 ರಂದು ಸಹಾಯಕ ಅಭಿಯೋಗ ನಿರ್ದೇಶಕರಿಂದ ಮುಖ್ಯ ವಿಚಾರಣೆ**

ಎ.ಪಿ.ನರಸಿಂಹಮೂರ್ತಿ, ಅಬಕಾರಿ ಉಪ ನಿರೀಕ್ಷಕರು, ರಾಜ್ಯ ವಿಚಕ್ಷಣ ದಳ, ಬೆಂಗಳೂರು ಪ್ರಾ.ಸಾ–4 ದಿನಾಂಕ: 08–06–2012 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಇವರು ಇಲಾಖೆ ಸಾಕ್ಷಿದಾರರಾಗಿದ್ದು ಜಫ್ತು ಪಂಚನಾಮೆ ಬಗ್ಗೆ ನುಡಿದಿರುತ್ತಾರೆ.

**ಪಾಟಿ ಸವಾಲ್ : ಅರ್ಜಿದಾರರ ವಕೀಲರಿಂದ**

ಪ್ರಾ.ಸಾ–4, ಎ.ಪಿ.ನರಸಿಂಹಮೂರ್ತಿ ಅವರನ್ನು ಪಾಟಿ ಸವಾಲ್ ಮಾಡಲಾಗಿದ್ದು ಅವರ ಹೇಳಿಕೆಗಳು ಈ ರೀತಿ ಇರುತ್ತವೆ. "ದಿನಾಂಕ: 08–09–2009 ರಂದು ಸರ್ವೆ ನಂ–195 ಪಾಪಣ್ಣನವರಿಗೆ ಸೇರಿದೆ ಎಂದು ಹೇಳಲು ನಾನು ಯಾವುದೇ ದಾಖಲೆಗಳನ್ನು ನೋಡಿರುವುದಿಲ್ಲ. ಮೇಲ್ಕಂಡ ಸರ್ವೆ ನಂಬರನಲ್ಲಿ ಮಹಜರ್ ಮಾಡಿದೆವು ಎಂದು ಹೇಳಲು ಆಗುವುದಿಲ್ಲ. ಏಕೆಂದರೆ ನಾನು ಯಾವುದೇ ದಾಖಲೆಗಳನ್ನು ನೋಡಿರುವುದಿಲ್ಲ. ನ್ಯಾಯಾಲಯಕ್ಕೆ ಅಮಾನತ್ತು ಮಹಜರ್‌ನ ಜೆರಾಕ್ಸ್ ಪ್ರತಿಯನ್ನು ನೀಡಿದ್ದೀರಿ ಎಂದರೆ ಹೌದು ಎಂದು ಸಾಕ್ಷಿ ನುಡಿದಿರುತ್ತಾರೆ. ಜೆರಾಕ್ಸ್ ಪ್ರತಿಯನ್ನು ನೀವೇ ಸೃಷ್ಟಿಸಿದ್ದೀರಿ ಎಂದರೆ ಸರಿಯಲ್ಲ, ಪ್ರಾ.ಸಾ–2 ರವರು ಅವರ ಮುಖ್ಯ ವಿಚಾರಣೆಯಲ್ಲಿ ಅಮಾನತ್ತು ಪಂಚನಾಮೆಗೆ ಕೆ.ಆರ್.ಸರ್ಕಲ್, ಬೆಂಗಳೂರು ಇಲ್ಲಿ ಸಹಿ ಮಾಡಿರುತ್ತಾರೆಂದು ನುಡಿದಿರುತ್ತಾರೆ ಎಂದರೆ ನನಗೆ ತಿಳಿದಿಲ್ಲ. ಆ ದಿನ ನಾನು ಯಾವುದೇ ಅಮಾನತ್ತು ಪಂಚನಾಮೆ ಬರೆದಿಲ್ಲ ಮತ್ತು ಅದಕ್ಕೆ ನಾನು ಸಹಿ ಮಾಡಿಲ್ಲ ಎನ್ನುವುದು ಸರಿಯಲ್ಲ, ಪಂಚನಾಮೆ ಅಮಾನತ್ತಿನಲ್ಲಿ ಸಹಿ ಮಾಡಿರುವ ಹನುಮಂತಪ್ಪ ಮತ್ತು ಪರಶುರಾಮ ಆ ದಿವಸ ಸ್ಥಳದಲ್ಲಿ ಹಾಜರಿರಲಿಲ್ಲ ಮತ್ತು ಸಹಿ ಮಾಡಿಲ್ಲ ಎಂದು ಹೇಳಿದರೆ ಸರಿಯಲ್ಲ" ಎಂದು ಸಾಕ್ಷಿ ನುಡಿದಿರುತ್ತಾರೆ.

ದಿನಾಂಕ: 27–04–2012 ರಂದು ಅರ್ಜಿದಾರರಾದ ಎ.ಎನ್.ರವಿಕುಮಾರ್ ಅವರ ವಿಚಾರಣೆ "ಅರ್ಜಿದಾರರು ಈ ಮೂಲಕ ಪ್ರಮಾಣ ಮಾಡಿ ಹೇಳುವುದೇನೆಂದರೆ, ನಾನು ಈ ಕೇಸಿಗೂ ಯಾವುದೇ ಸಂಬಂಧವಿಲ್ಲ, ಏಕೆಂದರೆ ನನ್ನ ವಾಹನ ನೋಂ.ಸಂ: ಕೆಎ–03 ಎ–6870 ರನ್ನು ತುಮಕೂರು ಜಿಲ್ಲೆಯ ಶಿರಾದ ಪ್ರೈ. ವರ್ಕ್‌ಶಾಪ್‌ನಲ್ಲಿ ರಿಪೇರಿಗೆ ಬಿಟ್ಟಿದ್ದ ಸಮಯದಲ್ಲಿ ಯಾರೋ ನನ್ನ ವಾಹನವನ್ನು ತೆಗೆದುಕೊಂಡು ನನ್ನ ಗಮನಕ್ಕೆ ಬಾರದಂತೆ ಕೇಸಿನ ಕೃತ್ಯಕ್ಕೆ ಉಪಯೋಗಿಸಿದ್ದು ನನ್ನ ಮೇಲೆ ಸುಳ್ಳು ಕೇಸು ಮಾಡಿರುವುದರಿಂದ ನಾನು ನಿರುದ್ಯೋಗಿಯಾಗಿದ್ದು ಆದಾಯವಿಲ್ಲದೆ ಇರುವುದರಿಂದ ಪ್ರಾಧಿಕಾರಕ್ಕೆ ನೀಡಿರುವ ರೂ. 50,000/– ಗಳ ಬ್ಯಾಂಕ್ ಗ್ಯಾರಂಟಿಯನ್ನು ಹಿಂದಿರುಗಿಸಿ ಖಾಯಂ ಆಗಿ ವಾಹನವನ್ನು ಅವರ ವಶಕ್ಕೆ ನೀಡಲು ಈ ಪ್ರಾಧಿಕಾರದಲ್ಲಿ ಮನವಿ ಮಾಡಿರುತ್ತದೆ"

ದಿನಾಂಕ: 26–07–2012 ರಂದು ಅರ್ಜಿದಾರರಾದ ಎ.ಎನ್.ರವಿಕುಮಾರ್ ಅವರ ಮುಖ್ಯ ವಿಚಾರಣೆ ಮಾಡಲಾಗಿ ಅವರು ಪ್ರಾಧಿಕಾರದ ಮುಂದೆ ಅವರ ಹೇಳಿಕೆಗಳನ್ನು ನುಡಿದಿರುತ್ತಾರೆ. "ನಾನು ಈ ಕೇಸಿನ ಅರ್ಜಿದಾರನಾಗಿದ್ದು ಈ ವಾಹನವು ಎಂದರೆ ಕೆಎ–03 ಎ–6870 ನನಗೆ ಸೇರಿದೆ ಎಂದು ನಾನು ಯಾವುದೇ ತಪ್ಪು ಮಾಡದಿದ್ದರೂ ಸಹ ನನ್ನ ಮೇಲೆ ಫಿರ್ಯಾದುದಾರರು ಸುಳ್ಳಿನಿಂದ ಕೂಡಿದ ಫಿರ್ಯಾದಿಯನ್ನು ಸಲ್ಲಿಸಿರುತ್ತಾರೆ. ನಾನು ಯಾವುದೇ ತರವಾದ ಅಪರಾಧ ಮಾಡದಿದ್ದರೂ ಸಹ ನನ್ನನ್ನು ಈ ಕೇಸಿನಲ್ಲಿ ಸೇರಿಸಿರುತ್ತಾರೆ. ನನ್ನ ವಾಹನವನ್ನು ತುಮಕೂರು ಜಿಲ್ಲೆಯ ಶಿರಾದಲ್ಲಿ ವಾಹನವನ್ನು ರಿಪೇರಿ ಬಿಟ್ಟಿದ್ದು ನನಗೆ ತಿಳಿಯದಂತೆ ಯಾರೋ ನನ್ನ ವಾಹನವನ್ನು ಎತ್ತಿಕೊಂಡು ಹೋಗಿರುತ್ತಾರೆ. ಸದರಿ ವಾಹನದ ಬಾಡಿಗೆಯಿಂದ ಬರುವ ಆದಾಯದಿಂದ ನಾನು ಜೀವನ ನಡೆಸುತ್ತಿದ್ದೇನೆಂದು ಈ ವಾಹನದ ಮೇಲೆ ಈಗಾಗಲೇ ನಾನು ಶ್ರೀರಾಮ ಟ್ರಸ್ಟ್ ಪೋರ್ಟ್ ಫೈನಾನ್ಸ್ ಕಂಪನಿಯವರಿಂದ ಸಾಲ ಪಡೆದಿರುತ್ತೇನೆಂದು ಹೇಳಿಕೆ ನೀಡಿ ಅವರ ಮೇಲಿರುವ ಸುಳ್ಳು ಕೇಸನ್ನು ವಜಾ ಮಾಡಿ ಪ್ರಕರಣದಲ್ಲಿ ಜಪ್ತು ಮಾಡಿರುವ ವಾಹನವನ್ನು ಅವರ ವಶಕ್ಕೆ ನೀಡಲು ಈ ಪ್ರಾಧಿಕಾರವನ್ನು ಕೋರಿರುತ್ತಾರೆ"

ಸಹಾಯಕ ಸರ್ಕಾರಿ ಅಭಿಯೋಜಕರು ವಾದ ಮಂಡಿಸಿ, ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯವನ್ನು ತಯಾರಿಸಲು ಮದ್ಯಸಾರವನ್ನು ಸಾಗಿಸಲು ಉಪಯೋಗಿಸಲಾಗಿದೆ ಮತ್ತು ಮಾಲು ಸಹಿತ ಅಬಕಾರಿ ನಿರೀಕ್ಷಕರು, ರಾಜ್ಯ ವಿಚಕ್ಷಣ ದಳ, ಬೆಂಗಳೂರು ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸ್ ದಾಖಲಿಸಿರುತ್ತಾರೆ. ಕೇಸ್ ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇದರಿಂದ, ಈ ವಾಹನದಲ್ಲಿ ಮದ್ಯಸಾರವನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮದ್ಯಸಾರ ಮತ್ತು ಪ್ರಕರಣದಲ್ಲಿ ಜಪ್ತಿ ಮಾಡಿರುವ ಇತರೆ ವಸ್ತುಗಳನ್ನು, ಪರಿಕರಣಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ. ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.

1. 1ನೇ ಅಂಶಕ್ಕೆ ಹೌದು ಎಂತಲೂ.
2. 2ನೇ ಅಂಶಕ್ಕೆ ಹೌದು ಎಂತಲೂ.
3. 3ನೇ ಅಂಶಕ್ಕೆ ಈ ಕೆಳಗಿನಂತೆ ವಿವರಿಸಿದೆ.

**ಅಂಶ–1:** ದಿನಾಂಕ: 08–09–2009 ರಂದು ಬೆಳಿಗ್ಗೆ 6–00 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು–1, ರಾಜ್ಯ ವಿಚಕ್ಷಣ ದಳ, ಬೆಂಗಳೂರು ಮತ್ತು ಸಿಬ್ಬಂದಿ ವರ್ಗದವರು ಬಾತ್ಮಿಯ ಆಧಾರದ ಮೇರೆಗೆ ಕೋಲಾರ ಜಿಲ್ಲೆ, ಮಾಲೂರು ತಾಲ್ಲೂಕಿನ ಮಿಂಡಹಳ್ಳಿ ಗ್ರಾಮ ಪಂಚಾಯ್ತಿಯ ಶಿವಾರಪಟ್ಟಣದ ಸರ್ವೆ ನಂ.195 ರಲ್ಲಿರುವ ಪಾಪಣ್ಣ ಎಂಬುವರಿಗೆ ಸೇರಿದೆ ಎನ್ನಲಾದ ತೋಟದಲ್ಲಿರುವ ರೇಷ್ಮೆ ಹುಳು ಸಾಕುವ ವಾಸದ ಹೆಂಚಿನ ಮನೆಯೊಳಗೆ ಮತ್ತು ಸದರಿ ಮನೆಯ ಸುತ್ತಮುತ್ತಲಿನಲ್ಲಿ ಅಕ್ರಮವಾಗಿ 5 ನೀಲಿ ಬಣ್ಣದ 220 ಲೀಟರ್ ಸಾಮರ್ಥ್ಯದ ಪ್ಲಾಸ್ಟಿಕ್ ಬ್ಯಾರಲ್‌ಗಳಲ್ಲಿ ತಲಾ 220 ಲೀಟರ್‌ನಂತೆ ಒಟ್ಟು 1100 ಲೀಟರ್ ಮದ್ಯಸಾರವನ್ನು ಟಾಟಾ 407 ವಾಹನದ ನೋಂದಣಿ ಸಂಖ್ಯೆ: ಕೆಎ–03 ಎ–6870 ರಲ್ಲಿ ಹಾಗೂ ಮನೆಯಲ್ಲಿ ಅಕ್ರಮವಾಗಿ 10 ನೀಲಿ ಬಣ್ಣದ 220 ಲೀಟರ್ ಸಾಮರ್ಥ್ಯದ ಪ್ಲಾಸ್ಟಿಕ್ ಬ್ಯಾರಲ್‌ಗಳಲ್ಲಿ ತಲಾ 220 ಲೀಟರ್‌ನಂತೆ ಒಟ್ಟು 2200 ಲೀಟರ್ ಮದ್ಯಸಾರವನ್ನು ಹೀಗೆ ಒಟ್ಟು 3300 ಲೀಟರ್ ಮದ್ಯಸಾರವನ್ನು ಸಂಗ್ರಹಿಸಿಟ್ಟುಕೊಂಡಿರುವ ಕೃತ್ಯವನ್ನು ಅಬಕಾರಿ ನಿರೀಕ್ಷಕರು, ರಾಜ್ಯ ವಿಚಕ್ಷಣ ದಳ, ಬೆಂಗಳೂರು ಮತ್ತು ಅವರ ಸಿಬ್ಬಂದಿಯೊಡನೆ ಪತ್ತೆಹಚ್ಚಿ ಪ್ರಕರಣವನ್ನು ದಾಖಲಿಸಿಕೊಂಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ ಮತ್ತು ನಿಯಮಗಳನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**<u>ಅಂಶ–02:–</u>** ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43 (ಬಿ) ರಂತೆ ಸದರಿ ಪ್ರಕರಣದಲ್ಲಿ ಜಪ್ತಿ ಮಾಡಿರುವ ವಾಹನ ನೋಂದಣಿ ಸಂಖ್ಯೆ: ಕೆಎ–03 ಎ–6870 ಅದರ ನೋಂದಣಿ ಮಾಲೀಕರಾದ ಎ.ಎನ್.ರವಿಕುಮಾರ್ ಅವರಿಗೆ ಈ ಪ್ರಾಧಿಕಾರದ ದಿ: 07–12–2009ರ ಕಾರಣಕೇಳಿ ನೋಟೀಸಿನಲ್ಲಿ ಅವರ ವಾಹನವನ್ನು ಅಕ್ರಮವಾಗಿ ಮದ್ಯಸಾರವನ್ನು ಸಾಗಾಟಣೆ ಮಾಡಲು ಉಪಯೋಗಿಸಿಕೊಂಡು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳನ್ನು ಉಲ್ಲಂಘಿಸಿರುವುದಕ್ಕೆ ಪ್ರಕರಣದಲ್ಲಿ ಜಪ್ತಿ ಮಾಡಿರುವ ಅವರ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕೇಳಲಾಗಿರುತ್ತೆ. ಅದಕ್ಕೆ ಸದರಿ ಮಾಲೀಕರು ಅವರ ದಿ: 30–12–2009ರ ಸಮಜಾಯಿಷಿ ಪತ್ರದಲ್ಲಿ ಅವರ ಗಮನಕ್ಕೆ ಬಾರದಂತೆ ಅವರ ವಾಹನವನ್ನು ಕದ್ದುಕೊಂಡು ಹೋಗಿ ಅಬಕಾರಿ ಅಕ್ರಮ ಚಟುವಟಿಕೆಗಳಲ್ಲಿ ಬಳಸಿಕೊಂಡಿದುದ್ದರಿಂದ, ಅವರ ವಾಹನವನ್ನು ಅವರ ಸುಪರ್ದಿಗೆ ಬಿಡಲು ಕೋರಿ ಕೊಂಡಿರುತ್ತಾರೆ.

ಆರ್.ಸಿ.ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಸೂಕ್ತ ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರ.

**<u>ಅಂಶ–03:–</u>** ದಿನಾಂಕ: 08–09–2009 ರಂದು ಬೆಳಿಗ್ಗೆ 6–00 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು–1, ರಾಜ್ಯ ವಿಚಕ್ಷಣ ದಳ, ಬೆಂಗಳೂರು ಮತ್ತು ಅವರ ಸಿಬ್ಬಂದಿ ವರ್ಗದವರು ಬಾತ್ಮಿಯ ಆಧಾರದ ಮೇರೆಗೆ ಕೋಲಾರ ಜಿಲ್ಲೆ, ಮಾಲೂರು ತಾಲ್ಲೂಕಿನ ಮಿಂಡಹಳ್ಳಿ ಗ್ರಾಮ ಪಂಚಾಯ್ತಿಯ ಶಿವಾರಪಟ್ಟಣದ ಸರ್ವೆ ನಂ–195 ರಲ್ಲಿರುವ ಪಾಪಣ್ಣ ಎಂಬುವರಿಗೆ ಸೇರಿದೆ ಎನ್ನಲಾದ ತೋಟದಲ್ಲಿರುವ ರೇಷ್ಮೆ ಹುಳು ಸಾಕುವ ವಾಸದ ಹೆಂಚಿನ ಮನೆಯೊಳಗೆ ಮತ್ತು ಸದರಿ ಮನೆಯ ಸುತ್ತಮುತ್ತಲಿನಲ್ಲಿ ಅಕ್ರಮವಾಗಿ 5 ನೀಲಿ ಬಣ್ಣದ 220 ಲೀಟರ್ ಸಾಮರ್ಥ್ಯದ ಪ್ಲಾಸ್ಟಿಕ್ ಬ್ಯಾರಲ್‌ಗಳಲ್ಲಿ ತಲಾ 220 ಲೀಟರ್‌ನಂತೆ ಒಟ್ಟು 1100 ಲೀಟರ್ ಮದ್ಯಸಾರವನ್ನು ಟಾಟಾ 407 ವಾಹನದ ನೋಂದಣಿ ಸಂಖ್ಯೆ: ಕೆಎ–03 ಎ–6870 ರಲ್ಲಿ ಹಾಗೂ ಮನೆಯಲ್ಲಿ ಅಕ್ರಮವಾಗಿ 10 ನೀಲಿ ಬಣ್ಣದ 220 ಲೀಟರ್ ಸಾಮರ್ಥ್ಯದ ಪ್ಲಾಸ್ಟಿಕ್ ಬ್ಯಾರಲ್‌ಗಳಲ್ಲಿ ತಲಾ 220 ಲೀಟರ್‌ನಂತೆ ಒಟ್ಟು 2200 ಲೀಟರ್ ಮದ್ಯಸಾರವನ್ನು ಹೀಗೆ ಒಟ್ಟು 3300

ಲೀಟರ್ ಮದ್ಯಸಾರವನ್ನು ಸಂಗ್ರಹಿಸಿಕೊಂಡಿರುವ ಕೃತ್ಯವನ್ನು ಅಬಕಾರಿ ನಿರೀಕ್ಷಕರು, ರಾಜ್ಯ ವಿಚಕ್ಷಣ ದಳ, ಬೆಂಗಳೂರು ಮತ್ತು ಅವರ ಸಿಬ್ಬಂದಿಯೊಡನೆ ಪತ್ತೆಹಚ್ಚಿ ಪ್ರಕರಣವನ್ನು ಪಂಚನಾಮೆ ಮೂಲಕ ಜಪ್ತಿ ಪಡಿಸಿಕೊಂಡಿರುವ ಸದರಿ ಸ್ವತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರವನ್ನು ಕೋರಿರುತ್ತಾರೆ.

ಆರ್.ಸಿ. ಪುಸ್ತಕದ ಪ್ರಕಾರ ಅರ್ಜಿದಾರರಾದ ಎ.ಎನ್.ರವಿಕುಮಾರ್ ಇವರನ್ನು ಸದರಿ ವಾಹನದ ಮಾಲೀಕರೆಂದು ಪರಿಗಣಿಸಲಾಗಿದೆ. ಅಲ್ಲದೇ ಆರ್.ಸಿ.ಮಾಲೀಕರು ಮುಗ್ದರೆನ್ನುವುದಕ್ಕಾಗಲೀ, ವಾಹನ ಮಾಲೀಕರ ಗಮನಕ್ಕೆ ಬಾರದೆ ಈ ಕೃತ್ಯ ನಡೆದಿದೆ ಎನ್ನುವುದಕ್ಕಾಗಲೀ, ಈ ಪ್ರಕರಣದಲ್ಲಿ ಅರ್ಜಿದಾರರು ಭಾಗಿಯಾಗಿಲ್ಲವೆನ್ನುವುದಕ್ಕಾಗಲೀ ಈ ಬಗ್ಗೆ ವಿಚಾರಣೆ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಬೀತುಪಡಿಸಿರುವುದಿಲ್ಲ.

ಅಲ್ಲದೇ, ವಾಹನ ಮಾಲೀಕರಾಗಲೀ, ಅವರ ಪರ ಚಾಲಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ, ವಾಹನದಲ್ಲಿ ಕಳ್ಳ ಸಾಗಾಣಿಕೆಯಾಗದಂತೆ ಮುನ್ನೆಚ್ಚರಿಕೆ ಕ್ರಮವಹಿಸಬೇಕಾಗಿರುತ್ತದೆ. ಈ ಬಗ್ಗೆ ಗೌರವಾನ್ವಿತ ಮಾನ್ಯ ಉಚ್ಚ ನ್ಯಾಯಾಲಯ, ಕರ್ನಾಟಕವು ಈ ಕೆಳಗಿನಂತೆ ಆದೇಶ ನೀಡಿರುವುದನ್ನು ಉಲ್ಲೇಖಿಸುತ್ತಾ,

> The Hon'ble high Court of Karnataka Bangalore in the case of Ramesh N.Dixit V/S State of Karnataka, 1987 (2) Kar.L.j.Sl.No.278:ILR 1985 Kar 2571 held that "The owner required to show under sub-section (2) of section 71-B is that he, his agent, if any and the person in charge of the vehicle (in this case driver) each, had taken all reasonable and necessary precautions against the misusing of the vehicle and that this offence had been committed without the knowledge or connivance any of them. …………………………………… …………………………………… it is not merely enough if the truck owner says that his truck had been misused without his knowledge or connivance, but in addition he is bound to slow that he had taken all reasonable and necessary precautions against such misuse".

ಪ್ರಸ್ತುತ ಪ್ರಕರಣದಲ್ಲಿ ವಾಹನದ ಮಾಲೀಕರಾಗಲೀ ಅವರ ಪ್ರತಿನಿಧಿಗಳಾಗಲೀ ಮತ್ತು ಚಾಲಕರಾಗಲೀ ಈ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರವನ್ನು ಸಾಗಿಸದಂತೆ ಯಾವುದೇ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಂಡ ಬಗ್ಗೆ ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಬೀತುಪಡಿಸಿರುವುದಿಲ್ಲ.

**<u>ಅಂಶ–04:–</u>** ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಮಾನಗಳನ್ನು ಅರಿತು ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಗದ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತವೆ.

1) ಟಾಟಾ 407 ವಾಹನ ನೋಂದಣಿ ಸಂಖ್ಯೆ: ಕೆಎ–03 ಎ–6870ರಲ್ಲಿ ಮದ್ಯಸಾರವನ್ನು ದಿನಾಂಕ: 08–09–2009 ರಂದು ಅಕ್ರಮವಾಗಿ ಸಾಗಿಸಲು ಉಪಯೋಗಿಸಲಾಗಿತ್ತೆ ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅಕ್ರಮ ಮದ್ಯ ತಯಾರಿಕೆಯ ಅಪರಾಧವೆಸಗಿ ಕರ್ನಾಟಕ ಅಬಕಾರಿ ಕಾಯ್ದೆ ಮತ್ತು ನಿಯಮಗಳನ್ನು ಉಲ್ಲಂಘಿಸಲಾಗಿದೆಯೇ ?
2) ಕರ್ನಾಟಕ ಅಬಕಾರಿ ಕಾಯ್ದೆ 1965 ಕಲಂ 43(ಬಿ) ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿದೆಯೇ ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶಗಳನ್ನು ನೀಡಲಾಗಿದೆಯೇ ?
3) ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕರಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರವನ್ನು ಸಾಗಿಸಲು ಶಾಮೀಲಾಗಿದ್ದಾರೆಯೇ ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರವಾಗಿ ಮದ್ಯಸಾರವನ್ನು ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು, ವಾಹನ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುತ್ತಾರೆಯೇ ?
4) ತೀರ್ಮಾನಕ್ಕೆ ಬರಬಹುದಾಗಿದೆ.

**ಆದೇಶ**

ಹೆಚ್.ಬಿ.ಬಾಲಗಂಗಾಧರ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ) ರಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕಲಂ 43(ಬಿ) ಅಡಿ ಕ್ರಮ ಜರುಗಿಸಿದ ನಂತರ ಅಬಕಾರಿ ನಿರೀಕ್ಷಕರು, ರಾಜ್ಯ ವಿಚಕ್ಷಣ ದಳ, ಬೆಂಗಳೂರು ಇವರ ಪ್ರ.ಮಾ.ವ. ಸಂಖ್ಯೆ: 14/2009–2010, ದಿನಾಂಕ: 08–09–2009ರಲ್ಲಿ ಜಪ್ತು ಪಡಿಸಿರುವ ಟಾಟಾ ವಾಹನ ನೋಂದಣಿ ಸಂಖ್ಯೆ: ಕೆಎ–03 ಎ–6870ರ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ)(2) ಅಡಿಯಲ್ಲಿ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದಿಂದ ದಿನಾಂಕ: 29–01–2010 ರ ಮಧ್ಯಂತರ ಆದೇಶದ ಮೇರೆಗೆ ಸದರಿ ವಾಹನ ನೋಂದಣಿ ಮಾಲೀಕರಿಗೆ ತಾತ್ಕಾಲಿಕವಾಗಿ ಬಿಡುಗಡೆ ಮಾಡಿದ್ದ ಆದೇಶವನ್ನು ರದ್ದು ಪಡಿಸಲಾಗಿರುತ್ತೆ. ಸದರಿ ವಾಹನ ಮಾಲೀಕರು ವಾಹನವನ್ನು ಮಧ್ಯಂತರವಾಗಿ ತಮ್ಮ ವಶಕ್ಕೆ ಪಡೆಯುವ ಸಮಯದಲ್ಲಿ ಪ್ರಾಧಿಕಾರಕ್ಕೆ ಸಲ್ಲಿಸಿದ್ದ ಬ್ಯಾಂಕ್ ಗ್ಯಾರಂಟಿ ರೂ. 50,000/– (ಐವತ್ತು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಸರ್ಕಾರಕ್ಕೆ ಇನ್‌ವೋಕ್ ಮಾಡಿಕೊಂಡು ಈ ಮೊತ್ತವನ್ನು ದಂಡ ಮತ್ತು ಮುಟ್ಟುಗೋಲು ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಭರಿಸಲು ಆದೇಶಿಸಿದೆ. ಸದರಿ ಪ್ರಕರಣದಲ್ಲಿ ಸರ್ಕಾರಕ್ಕೆ ಯಾವುದೇ ನಷ್ಟ ಉಂಟಾಗದೆ ಇರುವುದರಿಂದ, ಬ್ಯಾಂಕ್ ಗ್ಯಾರಂಟಿ ಮೊತ್ತವು ಸರ್ಕಾರಕ್ಕೆ ಜಮೆಯಾದ ನಂತರ ಪ್ರಕರಣದಲ್ಲಿ ಜಪ್ತಿ ಮಾಡಿ ಮುಟ್ಟುಗೋಲು ಹಾಕಿಕೊಂಡಿರುವ ವಾಹನವನ್ನು ಅರ್ಜಿದಾರರಿಗೆ ಹಸ್ತಾಂತರಿಸಲು ಆದೇಶಿಸಿದೆ.

ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 06–05–2013ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ.

ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರೂ ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಹೆಚ್.ಬಿ.ಬಾಲಗಂಗಾಧರ,**
ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು,
ಕೋಲಾರ ಜಿಲ್ಲೆ, ಕೋಲಾರ.

**ಅನುಬಂಧ–1**

**ಫಿರ್ಯಾದುದಾರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

| | | |
|---|---|---|
| **ಪ್ರಾ.ಸಾ–1** | : | ವೈ.ಭರತೇಶ್, ಅಬಕಾರಿ ನಿರೀಕ್ಷಕರು, ರಾಜ್ಯ ವಿಚಕ್ಷಣ ದಳ, ಬೆಂಗಳೂರು. |
| **ಪ್ರಾ.ಸಾ–2** | : | ಹನುಮಂತಪ್ಪ ಬಿನ್ ತಿಮ್ಮಣ್ಣ, ವಯಸ್ಸು 30 ವರ್ಷಗಳು, ವ್ಯಾಪಾರ, ಬೆಂಗಳೂರು, (ಪಂಚನಾಮೆ ಸಾಕ್ಷಿದಾರರು) |
| **ಪ್ರಾ.ಸಾ–3** | : | ಕೆ.ಎಂ.ನಾಗಭೂಷಣ್ ಬಿನ್ ಕೆ.ಎನ್.ನಾರಾಯಣಸ್ವಾಮಿ, ಅಬಕಾರಿ ರಕ್ಷಕ, ರಾಜ್ಯ ವಿಚಕ್ಷಣ ದಳ, ಬೆಂಗಳೂರು, (ಇಲಾಖೆಯ ಪಂಚನಾಮೆ ಸಾಕ್ಷಿದಾರರು) |
| **ಪ್ರಾ.ಸಾ–4** | : | ಎ.ಪಿ.ನರಸಿಂಹಮೂರ್ತಿ ಬಿನ್ ಲೇಟ್ ಅಣೆಗೌಡ, ಅಬಕಾರಿ ಉಪ ನಿರೀಕ್ಷಕರು, ರಾಜ್ಯ ವಿಚಕ್ಷಣ ದಳ, ಬೆಂಗಳೂರು. (ಇಲಾಖೆಯ ಪಂಚನಾಮೆ ಸಾಕ್ಷಿದಾರರು, ಪ್ರಸ್ತುತ ಅಬಕಾರಿ ನಿರೀಕ್ಷಕರು, ಕೊರಟಗೆರೆ ವಲಯ, ತುಮಕೂರು ಜಿಲ್ಲೆ) |

**ಫಿರ್ಯಾದುದಾರ ಪರ ಮಂಡಿಸಲಾದ ದಾಖಲೆಗಳು**

| | | |
|---|---|---|
| **ನಿಶಾನೆ.ಪಿ – 1** | : | ಪ್ರ.ಮಾ.ವರದಿ ಪ್ರತಿ. |
| **ನಿಶಾನೆ.ಪಿ – 2** | : | ಮಹಜರ್ ಪ್ರತಿ. |
| **ನಿಶಾನೆ.ಪಿ – 3** | : | ಸ್ವತ್ತಿನ ಪಟ್ಟಿ. |
| **ನಿಶಾನೆ.ಪಿ – 4** | : | ರಾಸಾಯನಿಕ ವಿಶ್ಲೇಷಣೆ ವರದಿ ಪ್ರತಿ. |

**ಅನುಬಂಧ–3**

ವಾಹನ ಮಾಲೀಕರ ಪರವಾಗಿ ಮಾಡಲಾದ ಸಾಕ್ಷಿದಾರರು – ಇರುವುದಿಲ್ಲ.

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು – ಆರ್.ಸಿ. ಪುಸ್ತಕ ಪ್ರತಿ.

**ಹೆಚ್.ಬಿ.ಬಾಲಗಂಗಾಧರ,**
ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು,
ಕೋಲಾರ ಜಿಲ್ಲೆ, ಕೋಲಾರ.

**PR 2259**

## KRIS WORLD MARKETS PRIVATE LIMITED

**Regd. office: No.3039, "Raghava Sadana ", Paramahamsa Road, Yadavagiri, Mysore-570020**

Notice is hereby given that, pursuant to Section 485 of the Companies Act, 1956, the Company in terms of Section 484(1) of the Companies Act, 1956, passed a Special Resolution at **the Extra Ordinary General Meeting held on 06.12.2013 at 10.00 A.M.** to wind up the Company by members voluntary winding up.

That the Company has appointed Mr. K Dushyantha Kumar, Bangalore as Liquidator of the Company for the purpose of such winding up as per the provisions of the Companies Act, 1956.

**K Dushyantha Kumar**
Liquidator

**FORM NO. 151**

**[See rule 315] COMPANIES ACT, 1956**

**Members Voluntary Winding-up**

**Notice of appointment of liquidator pursuant to section 516**

| | |
|---|---|
| Name of company : | **KRIS WORLD MARKETS PRIVATE LIMITED** |
| Nature of business : | SETTING UP OF SUPERMARKETS, CHAIN STORES, SHOPS AND ESTABLISHMENT, DEALING IN ALL TYPE OF CONSUMER GOODS, |

| | |
|---|---|
| | COSMETICS, FOOD ITEMS, BEVERAGES, SOFT DRINKS, HEALTH CARE AND BEAUTY PRODUCTS, DRUGS, MEDICINES, HORTICULTURAL ITEMS, CONSUMER DURABLES, BAKERY PRODUCTS, GLASSWARE, CROCKERY AND CUTLERY EITHER AS WHOLESALERS AND RETAILERS. |
| Address of Registered Office : | NO. 3039, "RAGHAVA SADANA", PARAMAHAMSA ROAD, YADAVAGIRI MYSORE - 570020 KARNATAKA |
| Name(s) and address (es) of Liquidator(s) : | **K. DUSHYANTHA KUMAR** #71 SHOP STREET, 9TH CROSS JAYANAGAR 2ND BLOCK BANGALORE-560011 |
| Date of appointment : | 06.12.2013 |
| By whom appointed : | THE SHAREHOLDERS OF THE COMPANY BY SPECIAL RESOLUTION DATED :06-12-2013 |

For KRIS World Markets Private Limited
(in voluntary Liquidation)

**PD - 140**
**Sc - 5**

**K Dushyantha Kumar**
Liquidator

## RUSSELL FINANCIAL SERVICES INDIA PRIVATE LIMITED

**Regd. office: RRA Corporate Services, #302, III Floor, Pride Elite, #10 Museum Road, Bangalore-560001**

Notice is hereby given that, pursuant to Section 485 of the Companies Act, 1956, the Company in terms of Section 484(1) of the Companies Act, 1956, passed a Special Resolution **at the Extra Ordinary General Meeting held on 29.11.2013 at 11:00 A.M.** to wind up the Company by members voluntary winding up.

That the Company has appointed Mr. K Dushyantha Kumar, Bangalore as Liquidator of the Company for the purpose of such winding up as per the provisions of the Companies Act, 1956.

**K Dushyantha Kumar**
Liquidator

## FORM NO. 151

**[See rule 315] COMPANIES ACT, 1956**

**Members Voluntary Winding·up**

**Notice of appointment of liquidator pursuant to section 516**

| | | |
|---|---|---|
| Name of company | : | **Russell Financial Services India Private Limited** |
| Nature of business | : | Financial Services |
| Address of Registered Office | : | RRA Corporate Services, #302, III Floor, Pride Elite, #10 Museum Road, Bangalore-560001 |
| Name(s) and address (es) of Liquidator(s) | : | **K DUSHYANTHA KUMAR** #71 SHOP STREET, 9TH CROSS JAYANAGAR 2ND BLOCK BANGALORE-560011 |
| Date of appointment | : | 29.11.2013 |
| By whom appointed | : | The Shareholders of the Company by Special Resolution Dated 29.11.2013 |

For Russell Financial Services India Private Limited
(In Voluntary Liquidation)

**PD - 141**
**Sc - 5**

**K Dushyantha Kumar**
Liquidator

## FORM NO.155

**[See rule 329]**

**[Members Voluntary Winding-up]**

**UNIVERSITAS 21 GLOBAL PRIVATE LIMITED**

**Notice convening final meeting**

Notice is hereby given in pursuance of section 497 that a Final General Meeting of the members of the above named company will be held at Manipal Towers, No. 14, HAL Airport Road, Bangalore-560008 **on the 15th day of January 2014 at 11:00 A.M** for the purpose of having an account laid before them showing the manner in which the winding- up has been conducted and the

property of the company disposed of and of hearing any explanation that may be given by the liquidator and also of determining by a special resolution of the company in the manner in which the books of accounts and documents of the company and of the liquidator shall be disposed of.

Date: 14.12.2013

Place: Bangalore

For **Universitieas 21 Global Private Limited**

Members Voluntary Winding-up

**K Dushyantha Kumar**

Liquidator

**PD - 142**
**Sc - 5**

## DECHO TECHNOLOGY INDIA PRIVATE LIMITED

**Redg, Office: No.43/61, Srinidhi, 1st Floor, Surveyor's Street, Basavanagudi, Bangalore-560004**

Notice is hereby given that, pursuant to Section 485 of the Companies Act, 1956, the Company in terms of Section 484(1) of the Companies Act, 1956, passed a Special Resolution **at the Extra Ordinary General Meeting held on 16.12.2013** *to wind up the Company by members voluntary winding up.*

That the Company has appointed Mr. K Dushyantha Kumar, Company Secretary in Practise Bangalore as Liquidator of the Company for the purpose of such winding up as per the provisions of the Companies Act, 1956.

**K Dushyantha Kumar**

Liquidator

## FORM NO. 151

**[See rule 315] COMPANIES ACT, 1956**

**Members Voluntary Winding-up**

**Notice of appointment of liquidator pursuant to section 516**

| | | |
|---|---|---|
| Name of company | : | **Decho Technology India Private Limited** |
| Nature of business | : | To carry on the business of software development and related services in all fields of applications. |
| Address of Registered Office | : | No.43/61, Srinidhi, 1st Floor, Surveyor's Street, Basavanagudi, Bangalore-560004 |
| Name(s) and address (es) of Liquidator(s) | : | **K DUSHYANTHA KUMAR**<br>Company Secretary in Practise<br>#71 SHOP STREET, 9TH CROSS JAYANAGAR 2ND BLOCK, BANGALORE-560011 |
| Date of appointment | : | 16.12.2013 |
| By whom appointed | : | The Shareholders of the Company by Special Resolution dated 16.12.2013 |

For Decho Technology India Private Limited
(in Voluntary liquidation)

Date: 20-12-2013
Place: Bangalore

**K Dushyantha Kumar**
Liquidator

**PD - 145**
**SC - 5**

## FORM NO.155

**[See Rule 329]**

**Members' Voluntary winding-up**

Name of the company : Hotel Dynamics India Private Limited (In Liquidation)

**Notice convening final meeting**

Notice is hereby given in pursuance of Section 497 that a General meeting of the members of Hotel Dynamics India Private Limited (In Liquidation) will be held on 31.1.2014 at No.463, 13th Cross, 10th Main, Wilson Garden, Bangalore – 560 027 at 11 A.M, for the purpose of having an account laid before them showing the manner in which the winding-up has been conducted and the property of the company disposed of and of hearing any explanation that may be given by the liquidator and also of determining by a special resolution, the manner in which the books, accounts and documents of the company and of the liquidator shall be disposed of.

Dated this 18th December, 2013

**SAJI P JOHN**
Liquidator

Hotel Dynamics India
Private Limited
(In Liquidation)

**PD - 144**
**SC – 5**

## ಇಂಧನ ಸಚಿವಾಲಯ

### ಅಧಿಕೃತ ಜ್ಞಾಪನ

**ಸಂಖ್ಯೆ : ಇಎನ್ 42 ಇಬಿಎಸ್ 2013, ಬೆಂಗಳೂರು, ದಿನಾಂಕ : 05ನೇ ಸೆಪ್ಟೆಂಬರ್, 2013.**

**ವಿಷಯ:** ದಿನಾಂಕ : 01.01.2013 ರಲ್ಲಿದ್ದಂತೆ ವಿದ್ಯುತ್ ಪರಿವೀಕ್ಷಣಾ ಇಲಾಖೆಯ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರುಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ.

**ಉಲ್ಲೇಖ:** ಅಧಿಕೃತ ಜ್ಞಾಪನ ಸಂಖ್ಯೆ : ಇಎನ್ 42 ಇಬಿಎಸ್ 2013 ದಿನಾಂಕ : 05.07.2013.

ಸರ್ಕಾರದ ವಿದ್ಯುತ್ ಪರಿವೀಕ್ಷಣಾ ಇಲಾಖೆಯ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರುಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 01.01.2013 ರಲ್ಲಿದ್ದಂತೆ ಉಲ್ಲೇಖಿತ ದಿನಾಂಕ: 05.07.2013 ರ ಅಧಿಕೃತ ಜ್ಞಾಪನದಲ್ಲಿ ಪ್ರಕಟಿಸಲಾಗಿತ್ತು. ಜೇಷ್ಠತಾ ಕ್ರಮಾಂಕ ಹಾಗೂ ಇತರ ವಿಷಯಗಳ ಬಗ್ಗೆ ಆಕ್ಷೇಪಣೆ ಏನಾದರೂ ಇದ್ದಲ್ಲಿ ಸಂಬಂಧಪಟ್ಟವರು ಅವುಗಳನ್ನು ಪತ್ರ ಹೊರಡಿಸಿದ 15 ದಿನಗಳೊಳಗೆ ಸರ್ಕಾರಕ್ಕೆ ಮುಖ್ಯ ವಿದ್ಯುತ್ ಪರಿವೀಕ್ಷಕರ ಮೂಲಕ ಕಳುಹಿಸಿಕೊಡುವಂತೆ ಕೋರಲಾಗಿತ್ತು.

ಈ ಸಂಬಂಧ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರುಗಳಿಂದ ಬಂದ ಆಕ್ಷೇಪಣೆಗಳನ್ನು ಪರಿಗಣಿಸಿದ್ದು. ದಿನಾಂಕ: 05.07.2013 ರಂದು ಹೊರಡಿಸಿರುವ ತಾತ್ಕಾಲಿಕ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರುಗಳ ಜೇಷ್ಠತಾ ಪಟ್ಟಿಯನ್ನು ಅಂತಿಮಗೊಳಿಸಲಾಗಿದೆ. ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ: 01.01.2013 ರಲ್ಲಿದ್ದಂತೆ **ಅನುಬಂಧದಲ್ಲಿ** ಪ್ರಕಟಿಸಲಾಗಿದೆ.

**ಅನುಬಂಧ**

**ದಿನಾಂಕ: 01.01.2013 ರಲ್ಲಿದ್ದಂತೆ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ವೃಂದದ ಅಂತಿಮ ಜೇಷ್ಠತಾ ಪಟ್ಟಿ**

| ಕ್ರಮ ಸಂಖ್ಯೆ | ಹೆಸರು ಶ್ರೀಯುತರು / ಶ್ರೀಮತಿ | ನೇರ ನೇಮಕಾತಿ ಮುಂಬಡ್ತಿ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ಮುಂಬಡ್ತಿಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|
| 1 | **ಹೆಚ್. ಬಿ. ಲಕ್ಷ್ಮೀಶ** | ಮುಂಬಡ್ತಿ | 20–07–1959 | 30–01–1984 | 21–02–2003 | 27–02–2003 |
| 2 | **ಡಿ.ಎಲ್. ನಾಗರಾಜು** | ಮುಂಬಡ್ತಿ | 24–03–1960 | 25–01–1984 | 21–02–2003 | 21–02–2003 |
| 3 | **ಪಿ. ಮಹಮ್ಮದ್ ಜಾವಿದ್ ರಬ್ಬಾನಿ** | ಮುಂಬಡ್ತಿ | 01–11–1960 | 16–01–1984 | 21–02–2003 | 22–02–2003 |
| 4 | **ಎಂ.ಎಸ್. ಬಸವರಾಜು** | ಮುಂಬಡ್ತಿ | 05–01–1955 | 17–01–1984 | 21–02–2003 | 24–02–2003 |
| 5 | **ಎಂ.ವಿ. ಶಶಿಧರ್** | ಮುಂಬಡ್ತಿ | 02–04–1958 | 23–01–1984 | 31–05–2006 | 24–06–2006 |
| 6 | **ನಂದಾ ವಿ. ಕುಲಕರ್ಣಿ** | ಮುಂಬಡ್ತಿ | 15–05–1960 | 25–01–1984 | 31–05–2006 | 08–06–2006 |
| 7 | **ಎಸ್. ಜಿ. ಸಿದ್ದಬಸಪ್ಪ** | ಮುಂಬಡ್ತಿ | 02–07–1958 | 23–01–1984 | 31–05–2006 | 09–06–2006 |

ಸಂಖ್ಯೆ: ಇಎನ್ 42 ಇಬಿಎಸ್ 2013

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಮೀರ್ ಮಡಿಮನ್,**
ಪೀಠಾಧಿಕಾರಿ (ವಿದ್ಯುಚ್ಛಕ್ತಿ),
ಇಂಧನ ಇಲಾಖೆ.

**P.R. 2321**
**S.C. 100**

## ಇಂಧನ ಸಚಿವಾಲಯ

### ಅಧಿಕೃತ ಜ್ಞಾಪನ

**ಸಂಖ್ಯೆ : ಇಎನ್ 43 ಇಬಿಎಸ್ 2013, ಬೆಂಗಳೂರು, ದಿನಾಂಕ : 05ನೇ ಸೆಪ್ಟೆಂಬರ್, 2013.**

**ವಿಷಯ:** ದಿನಾಂಕ : 01.01.2013 ರಲ್ಲಿದ್ದಂತೆ ವಿದ್ಯುತ್ ಪರಿವೀಕ್ಷಣಾ ಇಲಾಖೆಯ ವಿದ್ಯುತ್ ಪರಿವೀಕ್ಷಕರುಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ..

**ಉಲ್ಲೇಖ:** ಅಧಿಕೃತ ಜ್ಞಾಪನ ಸಂಖ್ಯೆ : ಇಎನ್ 43 ಇಬಿಎಸ್ 2013 ದಿನಾಂಕ : 05.07.2013.

ಸರ್ಕಾರದ ವಿದ್ಯುತ್ ಪರಿವೀಕ್ಷಣಾ ಇಲಾಖೆಯ ವಿದ್ಯುತ್ ಪರಿವೀಕ್ಷಕರುಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 01.01.2013 ರಲ್ಲಿದ್ದಂತೆ ಉಲ್ಲೇಖಿತ ದಿನಾಂಕ: 05.07.2013 ರ ಅಧಿಕೃತ ಜ್ಞಾಪನದಲ್ಲಿ ಪ್ರಕಟಿಸಲಾಗಿತ್ತು. ಜೇಷ್ಠತಾ ಕ್ರಮಾಂಕ ಹಾಗೂ ಇತರ ವಿಷಯಗಳ ಬಗ್ಗೆ ಆಕ್ಷೇಪಣೆ ಏನಾದರೂ ಇದ್ದಲ್ಲಿ ಸಂಬಂಧಪಟ್ಟವರು ಅವುಗಳನ್ನು ಪತ್ರ ಹೊರಡಿಸಿದ 15 ದಿನಗಳೊಳಗೆ ಸರ್ಕಾರಕ್ಕೆ ಮುಖ್ಯ ವಿದ್ಯುತ್ ಪರಿವೀಕ್ಷಕರ ಮೂಲಕ ಕಳುಹಿಸಿಕೊಡುವಂತೆ ಕೋರಲಾಗಿತ್ತು.

ಈ ಸಂಬಂಧ ವಿದ್ಯುತ್ ಪರಿವೀಕ್ಷಕರುಗಳಿಂದ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿಲ್ಲ. ಆದುದರಿಂದ ದಿನಾಂಕ: 05.07.2013 ರಂದು ಹೊರಡಿಸಿರುವ ತಾತ್ಕಾಲಿಕ ವಿದ್ಯುತ್ ಪರಿವೀಕ್ಷಕರುಗಳ ಜೇಷ್ಠತಾ ಪಟ್ಟಿಯನ್ನು ಅಂತಿಮಗೊಳಿಸಲಾಗಿದೆ. ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ: 01.01.2013 ರಲ್ಲಿದ್ದಂತೆ ಅನುಬಂಧದಲ್ಲಿ ಪ್ರಕಟಿಸಲಾಗಿದೆ.

**ಅನುಬಂಧ**

**ದಿನಾಂಕ 01-01-2013 ರಲ್ಲಿದ್ದಂತೆ ವಿದ್ಯುತ್ ಪರಿವೀಕ್ಷಕರ ವೃಂದದ ಅಂತಿಮ ಜೇಷ್ಠತಾ ಪಟ್ಟಿ**

| ಕ್ರಮ ಸಂಖ್ಯೆ | ಹೆಸರು ಶ್ರೀಯುತರು / ಶ್ರೀಮತಿ | ನೇರ ನೇಮಕಾತಿ ಮುಂಬಡ್ತಿ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ಮುಂಬಡ್ತಿಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|
| 1 | ಕೆ.ಬಿ. ಶಶಿರಾಜ್ | ಮುಂಬಡ್ತಿ | 15-02-1958 | 16-01-1984 | 21-02-2003 | 21-02-2003 |
| 2 | ಟಿ.ಎ. ಸಂಪತ್ ಕೃಷ್ಣಮಾಚಾರ್ | ಮುಂಬಡ್ತಿ | 01-06-1959 | 20-01-1984 | 21-02-2003 | 24-02-2003 |
| 3 | ಬದರಿನಾರಾಯಣ ಬಾಬು | ಮುಂಬಡ್ತಿ | 25-08-1958 | 16-01-1984 | 21-02-2003 | 21-02-2003 |
| 4 | ಪಿ. ಜಯರಾಂ | ಮುಂಬಡ್ತಿ | 05-04-1956 | 21-01-1984 | 21-02-2003 | 25-02-2003 |
| 5 | ಕೆ.ವಿ. ಸದಾನಂದ | ಮುಂಬಡ್ತಿ | 06-06-1958 | 19-01-1984 | 21-02-2003 | 21-02-2003 |
| 6 | ಎ.ಜೆ. ಕಾಂತರಾಜು | ಮುಂಬಡ್ತಿ | 04-05-1957 | 20-01-1984 | 21-02-2003 | 24-02-2003 |
| 7 | ಬಿ.ಪಿ. ನಾಗರಾಜ್ | ಮುಂಬಡ್ತಿ | 06-08-1957 | 13-01-1984 | 21-02-2003 | 21-02-2003 |
| 8 | ಮುರುಗಪ್ಪ ಎಸ್. ಪುರದ್ | ಮುಂಬಡ್ತಿ | 10-08-1958 | 23-01-1984 | 21-02-2003 | 28-02-2003 |
| 9 | ಕೆ.ಎಸ್. ಅಂಜನಪ್ಪ | ಮುಂಬಡ್ತಿ | 01-07-1956 | 23-01-1984 | 21-02-2003 | 25-02-2003 |
| 10 | ಎಂ.ಎನ್.ರಾಜು | ಮುಂಬಡ್ತಿ | 28-04-1959 | 06-02-1984 | 21-02-2003 | 24-02-2003 |
| 11 | ಎಂ.ಆರ್. ಶ್ರೀನಿವಾಸ್‌ಮೂರ್ತಿ | ಮುಂಬಡ್ತಿ | 22-07-1959 | 20-01-1984 | 21-02-2003 | 24-02-2003 |
| 12 | ಎಸ್.ಬಿ. ಖಾನಾಪುರ | ಮುಂಬಡ್ತಿ | 01-08-1956 | 14-10-1985 | 21-02-2003 | 21-02-2003 |
| 13 | ಎ.ಬಿ. ಮುರಿಗೇಶ್ | ಮುಂಬಡ್ತಿ | 01-06-1955 | 28-01-1984 | 13-02-2004 | 16-02-2004 |
| 14 | ಎಸ್.ಎಂ. ಶಶಿಧರ್ | ಮುಂಬಡ್ತಿ | 15-09-1958 | 17-04-1984 | 13-02-2004 | 16-02-2004 |
| 15 | ಎಂ. ಚಂದ್ರಶೇಖರ್ | ಮುಂಬಡ್ತಿ | 16-06-1959 | 18-04-1984 | 26-10-2005 | 07-11-2005 |
| 16 | ಆನಂದ ಜಿ. ದೇಶಪಾಂಡೆ | ಮುಂಬಡ್ತಿ | 02-06-1955 | 12-04-1984 | 26-10-2005 | 28-10-2005 |
| 17 | ಮಂಜುನಾಥ | ಮುಂಬಡ್ತಿ | 07-08-1956 | 18-11-1985 | 26-10-2005 | 28-10-2005 |
| 18 | ಕೆ.ಸಿ. ರೆಡ್ಡಿ | ಮುಂಬಡ್ತಿ | 02-08-1956 | 20-07-1992 | 26-10-2005 | 03-11-2005 |
| 19 | ತಿತೀರ ಎನ್. ಅಪ್ಪಚ್ಚು | ಮುಂಬಡ್ತಿ | 10-02-1970 | 25-07-1994 | 31-05-2006 | 07-06-2006 |
| 20 | ಬಿ.ವಿ. ಶಶಿಕಲಾ | ಮುಂಬಡ್ತಿ | 01-06-1967 | 18-07-1994 | 31-05-2006 | 08-06-2006 |
| 21 | ಸುದೇಶ್ ಮಾರ್ಟಿಸ್ | ಮುಂಬಡ್ತಿ | 19-11-1964 | 03-08-1994 | 22-03-2010 | 01-04-2010 |

ಸಂಖ್ಯೆ: ಇಎನ್ 43 ಇಬಿಎಸ್ 2013

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಮೀರ್ ಮಡಿಮನ್,**
ಪೀಠಾಧಿಕಾರಿ (ವಿದ್ಯುಚ್ಛಕ್ತಿ),
ಇಂಧನ ಇಲಾಖೆ.

**P.R. 2322**
**S.C. 100**

## ಇಂಧನ ಸಚಿವಾಲಯ

## ಅಧಿಕೃತ ಜ್ಞಾಪನ

**ಸಂಖ್ಯೆ : ಇಎನ್ 44 ಇಬಿಎಸ್ 2013, ಬೆಂಗಳೂರು, ದಿನಾಂಕ : 05ನೇ ಸೆಪ್ಟೆಂಬರ್, 2013.**

**ವಿಷಯ:** ದಿನಾಂಕ : 01.01.2013 ರಲ್ಲಿದ್ದಂತೆ ವಿದ್ಯುತ್ ಪರಿವೀಕ್ಷಣಾ ಇಲಾಖೆಯ ಉಪ ವಿದ್ಯುತ್ ಪರಿವೀಕ್ಷಕರುಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ..

**ಉಲ್ಲೇಖ:** ಅಧಿಕೃತ ಜ್ಞಾಪನ ಸಂಖ್ಯೆ : ಇಎನ್ 44 ಇಬಿಎಸ್ 2013 ದಿನಾಂಕ : 05-07-2013.

ಸರ್ಕಾರದ ವಿದ್ಯುತ್ ಪರಿವೀಕ್ಷಣಾ ಇಲಾಖೆಯ ಉಪ ವಿದ್ಯುತ್ ಪರಿವೀಕ್ಷಕರುಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 01.01.2013 ರಲ್ಲಿದ್ದಂತೆ ಉಲ್ಲೇಖಿತ ದಿನಾಂಕ: 05.07.2013 ರ ಅಧಿಕೃತ ಜ್ಞಾಪನದಲ್ಲಿ ಪ್ರಕಟಿಸಲಾಗಿತ್ತು. ಜೇಷ್ಠತಾ ಕ್ರಮಾಂಕ ಹಾಗೂ ಇತರ ವಿಷಯಗಳ ಬಗ್ಗೆ ಆಕ್ಷೇಪಣೆ ಏನಾದರೂ ಇದ್ದಲ್ಲಿ ಸಂಬಂಧಪಟ್ಟವರು ಅವುಗಳನ್ನು ಪತ್ರ ಹೊರಡಿಸಿದ 15 ದಿನಗಳೊಳಗೆ ಸರ್ಕಾರಕ್ಕೆ ಮುಖ್ಯ ವಿದ್ಯುತ್ ಪರಿವೀಕ್ಷಕರ ಮೂಲಕ ಕಳುಹಿಸಿಕೊಡುವಂತೆ ಕೋರಲಾಗಿತ್ತು.

ಈ ಸಂಬಂಧ ಉಪ ವಿದ್ಯುತ್ ಪರಿವೀಕ್ಷಕರುಗಳಿಂದ ಬಂದಿರುವ ಆಕ್ಷೇಪಣೆಗಳನ್ನು ಪರಿಶೀಲಿಸಿದ್ದು, ಈಗಾಗಲೇ ಪ್ರಕಟಿಸಿರುವ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಯಾವುದೇ ಬದಲಾವಣೆ ಅವಶ್ಯಕತೆ ಇಲ್ಲದಿರುವುದರಿಂದ ಹಾಗೂ ದಿನಾಂಕ: 05.07.2013 ರಂದು ಹೊರಡಿಸಿರುವ ತಾತ್ಕಾಲಿಕ ಉಪ ವಿದ್ಯುತ್

ಪರಿವೀಕ್ಷಕರುಗಳ ಜೇಷ್ಠತಾ ಪಟ್ಟಿಯನ್ನು ಅಂತಿಮಗೊಳಿಸಲಾಗಿದೆ. ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ: 01.01.2013 ರಲ್ಲಿದ್ದಂತೆ ಅನುಬಂಧದಲ್ಲಿ ಪ್ರಕಟಿಸಲಾಗಿದೆ.

**ಅನುಬಂಧ**

**ದಿನಾಂಕ 01–01–2013 ರಲ್ಲಿದ್ದಂತೆ ಉಪ ವಿದ್ಯುತ್ ಪರಿವೀಕ್ಷಕರ ಅಂತಿಮ ಜೇಷ್ಠತಾ ಪಟ್ಟಿ**

| ಕ್ರ. ಸಂ. | ಹೆಸರು ಶ್ರೀಯುತರು/ ಶ್ರೀಮತಿ | ನೇರನೇಮಕಾತಿ ಮುಂಬಡ್ತಿ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ಮುಂಬಡ್ತಿಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|
| 1 | ಕೆ.ಪದ್ಮನಾಭ | ಮುಂಬಡ್ತಿ | 16–12–1965 | 23–07–1994 | 11–04–2003 | 18–04–2003 |
| 2 | ಹೆಚ್.ಎಸ್. ವೆಂಕಟೇಶ್ | ಮುಂಬಡ್ತಿ | 31–10–1966 | 11–08–1994 | 11–04–2003 | 03–07–2003 |
| 3 | ಬಿ.ಕೆ. ವೆಂಕಟರೆಡ್ಡಿ | ಮುಂಬಡ್ತಿ | 19–03–1972 | 25–07–1994 | 11–04–2003 | 21–04–2003 |
| 4 | ಜಿ. ಗಿರೀಶ | ಮುಂಬಡ್ತಿ | 02–05–1971 | 16–07–1994 | 11–04–2003 | 12–05–2003 |
| 5 | ಕೆ. ನಾಗರಾಜು | ಮುಂಬಡ್ತಿ | 01–06–1967 | 05–08–1994 | 11–04–2003 | 17–04–2003 |
| 6 | ಹೆಚ್.ಎಸ್. ಚಿಕ್ಕಣ್ಣನವರ್ | ಮುಂಬಡ್ತಿ | 01–06–1962 | 20–07–1994 | 11–04–2003 | 17–04–2003 |
| 7 | ಚಂದ್ರಶೇಖರ್ ಎಸ್. ಗೊಳಸಂಗಿ | ಮುಂಬಡ್ತಿ | 19–08–1969 | 30–07–1994 | 11–04–2003 | 19–04–2003 |
| 8 | ಕೆ.ಎಂ. ಕಾಂತರಾಜು | ಮುಂಬಡ್ತಿ | 01–06–1967 | 16–07–1994 | 11–04–2003 | 17–04–2003 |
| 9 | ಸಿ.ಎಸ್. ಮುರಳೀಧರ | ಮುಂಬಡ್ತಿ | 07–01–1969 | 18–07–1994 | 11–04–2003 | 18–04–2003 |
| 10 | ಜಿ. ರವಿಕುಮಾರ್ | ಮುಂಬಡ್ತಿ | 07–11–1969 | 16–07–1994 | 11–04–2003 | 16–04–2003 |
| 11 | ಜೆ.ಹೆಚ್. ಶ್ರೀನಿವಾಸ | ಮುಂಬಡ್ತಿ | 10–05–1970 | 23–07–1994 | 11–04–2003 | 17–04–2003 |
| 12 | ಬಿ. ಸುಬ್ರಮಣ್ಯ | ಮುಂಬಡ್ತಿ | 29–03–1964 | 16–07–1994 | 11–04–2003 | 17–04–2003 |
| 13 | ಎಲ್. ಮೇಘನಾಯ್ಕ | ಮುಂಬಡ್ತಿ | 01–06–1964 | 16–07–1994 | 11–04–2003 | 18–04–2003 |
| 14 | ಟಿ.ಎಲ್. ಹನುಮಂತ ನಾಯ್ಕ | ಮುಂಬಡ್ತಿ | 16–07–1968 | 23–07–1994 | 11–04–2003 | 21–04–2003 |
| 15 | ಸಿದ್ದಪ್ಪ ಡಿ. | ಮುಂಬಡ್ತಿ | 01–02–1969 | 23–07–1994 | 13–02–2004 | 21–02–2004 |
| 16 | ಅಲ್ತಾಫ್ ಹುಸೇನ್ ಜಕಾರ್ತಿ | ಮುಂಬಡ್ತಿ | 20–10–1976 | 25–11–2002 | 01–06–2007 | 04–06–2007 |
| 17 | ಚಂದ್ರಶೇಖರ್ ಎಂ ಕಡಕೊಳ | ಮುಂಬಡ್ತಿ | 20–07–1971 | 02–12–2002 | 01–06–2007 | 07–06–2007 |
| 18 | ಹೇಮಂತ್ ಕುಮಾರ್ ಹೆಚ್.ಎನ್. | ಮುಂಬಡ್ತಿ | 16–06–1973 | 28–11–2002 | 01–06–2007 | 08–06–2007A/N |
| 19 | ಶ್ರೀನಿವಾಸ ಎಂ.ಸಿ. | ಮುಂಬಡ್ತಿ | 21–03–1978 | 25–11–2002 | 01–06–2007 | 07–06–2007 |
| 20 | ಶಿವಕುಮಾರ ಹಿರೇಮಣಿ | ಮುಂಬಡ್ತಿ | 09–08–1978 | 25–11–2002A/N | 01–06–2007 | 11–06–2007 |
| 21 | ಎ.ಎಸ್. ವೈಜಯಂತಿ | ಮುಂಬಡ್ತಿ | 16–05–1979 | 25–11–2002 | 01–06–2007 | 04–06–2007 |
| 22 | ಶ್ರೀನಿವಾಸ ಎನ್.ವಿ. | ಮುಂಬಡ್ತಿ | 07–04–1973 | 25–11–2002 | 01–06–2007 | 18–06–2007A/N |
| 23 | ಮಲ್ಲಪ್ಪ ಎಸ್. ಕುರಿ | ಮುಂಬಡ್ತಿ | 10–07–1975 | 27–11–2002A/N | 01–06–2007 | 07–06–2007 |
| 24 | ಹುಲಿಗೆಪ್ಪ | ಮುಂಬಡ್ತಿ | 04–03–1972 | 25–11–2002 | 01–06–2007 | 13–06–2007A/N |
| 25 | ವಿಜಯ ಕುಮಾರ್ ಎ.ಎನ್. | ಮುಂಬಡ್ತಿ | 23–07–1976 | 25–11–2002 | 01–06–2007 | 06–06–2007 |
| 26 | ಬಸವೇಗೌಡ ಬಿ.ಎನ್. | ಮುಂಬಡ್ತಿ | 02–01–1984 | 14–05–2007 | 12–01–2012 | 20–01–2012 |
| 27 | ಫರೀದಾ ಬೇಗಂ ಎನ್. | ಮುಂಬಡ್ತಿ | 08–06–1981 | 19–05–2007 | 12–01–2012 | 21–01–2012 |
| 28 | ಶ್ರೀಲಕ್ಷ್ಮಿ | ಮುಂಬಡ್ತಿ | 07–04–1984 | 18–05–2007 | 12–01–2012 | 21–01–2012 |
| 29 | ಮಂಜುನಾಥ ಸಿ.ಹೆಚ್. | ಮುಂಬಡ್ತಿ | 20–07–1984 | 14–05–2007 | 12–01–2012 | 19–01–2012 |
| 30 | ನೇತ್ರಾವತಿ ಎಂ. | ಮುಂಬಡ್ತಿ | 11–08–1983 | 22–05–2007 | 12–01–2012 | 03–02–2012 |
| 31 | ಗೋವಿಂದ ಮೊಗೇರ | ಮುಂಬಡ್ತಿ | 19–08–1984 | 18–05–2007 | 12–01–2012 | 17–02–2012 |
| 32 | ವೀಣಾ ಕೆ. | ಮುಂಬಡ್ತಿ | 24–05–1982 | 17–05–2007 | 12–01–2012 | 19–01–2012 |
| 33 | ಬಾಬಸಾಬ್ ದೇಸಾಯಿ | ಮುಂಬಡ್ತಿ | 20–12–1978 | 15–05–2007 | 12–01–2012 | 23–01–2012 |

ಸಂಖ್ಯೆ: ಇಎನ್ 44 ಇಬಿಎಸ್ 2013

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಮೀರ್ ಮಡಿಮನ್,**
ಪೀಠಾಧಿಕಾರಿ (ವಿದ್ಯುಚ್ಛಕ್ತಿ),
ಇಂಧನ ಇಲಾಖೆ.

**P.R. 2323**
**S.C. 100**

ಕರ್ನಾಟಕ ನಾಗರೀಕ ಸೇವಾ ನಡತೆ (ವರ್ತನೆ) ನಿಯಮಗಳು 1966ರ ಸಾಮಾನ್ಯ ನಿಯಮ 1) (i), (ii), (iii) ನ್ನು ಉಲ್ಲಂಘಿಸಿದ ಕಾರಣಕ್ಕಾಗಿ ಅನಧಿಕೃತ ಗೈರು ಹಾಜರಿಯ ಅವಧಿಗೆ ಪೂರ್ಣಾವಧಿ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ನ್ಯಾಯಮೂರ್ತಿ, ಶ್ರೀ ಎಂ.ಜಿ. ಹಿರೇಮಠ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲಾಯಿತು. ಅದರಂತೆ ವಿಚಾರಣಾಧಿಕಾರಿಗಳು ಸದರಿಯವರ ವಿರುದ್ಧದ ಆರೋಪಗಳ ಬಗ್ಗೆ ವಿಚಾರಣೆ ನಡೆಸಿ ದಿನಾಂಕ: 27.9.2012 ರಂದು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

ಆರೋಪಿತರ ವಿರುದ್ಧ ಆರೋಪಗಳ ಕುರಿತು ಸಾಕ್ಷ್ಯ ಮತ್ತು ಪ್ರಮುಖ ಅಂಶಗಳನ್ನು ಗಣನೆಗೆ ತೆಗೆದುಕೊಂಡು ವರದಿಯಲ್ಲಿ ವಿಶ್ಲೇಷಿಸಿರುವ ಸಾರಾಂಶ ಈ ಮುಂದಿನಂತಿದೆ.

ಆಪಾದಿತರು ಅವರ ವಿರುದ್ಧ ಮಾಡಿದ ಆರೋಪವನ್ನು ಒಪ್ಪಿಕೊಂಡಿದ್ದರಿಂದ ಮಂಡನಾಧಿಕಾರಿಗಳು ಆರೋಪವನ್ನು ಸಾಬೀತು ಪಡಿಸಲು ಯಾವುದೇ ಸಾಕ್ಷಿಧಾರರನ್ನು ವಿಚಾರಿಸಿರುವುದಿಲ್ಲ ಮತ್ತು ದಾಖಲೆಗಳನ್ನು ಹಾಜರು ಪಡಿಸಿರುವುದಿಲ್ಲ. ಮಂಡನಾಧಿಕಾರಿಗಳು ಆರೋಪ ಸಾಬೀತಾಗಿದೆಯೆಂದು ವರದಿ ಸಲ್ಲಿಸಲು ಕೋರಿರುತ್ತಾರೆ. ಆಪಾದಿತರು ಸಹ ತಮ್ಮ ಲಿಖಿತ ಪ್ರತಿವಾದವನ್ನು ಸಲ್ಲಿಸಿ ಮೌಖಿಕ ವಾದ ಮಂಡಿಸಿದರು.

ಆಪಾದಿತರ ವಿರುದ್ಧ ಮಾಡಿದ ಆರೋಪವನ್ನು ಗಮನಿಸಲಾಗಿ ಆಪಾದಿತರು ಪೂರ್ವಾನುಮತಿ ಪಡೆಯದೆ ದಿ: 04.10.2010ರಿಂದ 31.10.2010ರ ವರೆಗೆ ಹಾಗೂ ನವೆಂಬರ್ 2010 ರಿಂದ ಏಪ್ರಿಲ್ 2011 ರವರೆಗೆ ಮತ್ತು 04.10.2011ರಿಂದ ಇದುವರೆಗೂ ದೀರ್ಘಾವಧಿ ಅನಧಿಕೃತ ಗೈರು ಹಾಜರಾಗಿದ್ದು ಕಛೇರಿಯ ದೈನಂದಿನ ಕೆಲಸ ಕಾರ್ಯಗಳಿಗೆ ತೊಂದರೆಯನ್ನುಂಟುಮಾಡಿದ್ದರಿಂದ ಆಪಾದಿತರು ಗಂಭೀರ ಸ್ವರೂಪವಾದ ಆರೋಪವನ್ನು ಎಸಗಿದ್ದು ಕಂಡುಬರುತ್ತದೆ. ಆಪಾದಿತರು ದಿ: 04.10.2011ರಿಂದ 16.01.2012ರ ವರೆಗೆ Viral Fever and Jaundice ಖಾಯಿಲೆಯಿಂದ ಬಳಲುತ್ತಿದ್ದರೆಂದು ವೈದ್ಯಕೀಯ ಪ್ರಮಾಣ ಪತ್ರ ಹಾಜರುಪಡಿಸಿರುತ್ತಾರೆ. ಆದರೆ ಸದರಿ ವೈದ್ಯಕೀಯ ಪ್ರಮಾಣ ಪತ್ರಕ್ಕೆ ಮೇಲು ರುಜು ಆಗಲಾರದ ಕಾರಣ ಅದನ್ನು ಒಪ್ಪುವುದು ಸಾಧ್ಯವಿಲ್ಲ. ದಿ: 04.10.2010ರಿಂದ 31.10.2010ರ ವರೆಗೆ ಗೈರು ಹಾಜರಾತಿ ಬಗ್ಗೆ ಯಾವುದೇ ವೈದ್ಯಕೀಯ ಪ್ರಮಾಣ ಪತ್ರಗಳನ್ನಾಗಲೀ ಹಾಗೂ ಬೇರೆ ಇನ್ನೇನಾದರೂ ಮಹತ್ವದ ದಾಖಲೆಗಳನ್ನಾಗಲೀ ಹಾಜರುಪಡಿಸಿಲ್ಲವಾದ್ದರಿಂದ ಅವರು ಉದ್ದೇಶ ಪೂರ್ವಕವಾಗಿ ಪೂರ್ವಾನುಮತಿ ಪಡೆಯದೆ 28 ದಿನಗಳು ಗೈರುಹಾಜರಾಗಿರುತ್ತಾರೆ. ಒಟ್ಟಾರೆ ಸುಮಾರು 17 ತಿಂಗಳು 28 ದಿನಗಳ ಕಾಲ ದೀರ್ಘಾವಧಿ ಅನಧಿಕೃತ ಗೈರುಹಾಜರಾಗಿರುತ್ತಾರೆ. ಆಪಾದಿತರ ಕಡತವನ್ನು ಪರಿಶೀಲಿಸಲಾಗಿ ಆಪಾದಿತರು ಸರ್ವೇಸಾಮಾನ್ಯವಾಗಿ ಆಗಾಗ್ಗೆ ಅನಧಿಕೃತ ಗೈರು ಹಾಜರಾಗಿರುವುದು ಕಂಡುಬರುತ್ತದೆ. ಆದ್ದರಿಂದ ಆಪಾದಿತರು ಕಠಿಣ ಶಿಕ್ಷೆಗೆ ಅರ್ಹರಾಗಿರುತ್ತಾರೆ.

ಆಪಾದಿತರು ಅವರ ವಿರುದ್ಧ ಮಾಡಿದ ಆರೋಪವನ್ನು ತಮ್ಮ ಪ್ರಾರಂಭಿಕ ಹೇಳಿಕೆಯಲ್ಲಿ ಒಪ್ಪಿಕೊಂಡಿರುವುದರಿಂದ ಅವರ ವಿರುದ್ಧ ಮಾಡಿದ ಆರೋಪವು ಸಾಬೀತಾಗಿರುತ್ತದೆ ಎಂದು ನಿರ್ಧರಿಸಿ ಈ ಮುಖ್ಯಾಂಶವನ್ನು ಸಕಾರಾತ್ಮಕವಾಗಿ ನಿರ್ಣಯಿಸಿ ಈ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತೇನೆ ಎಂದು ವರದಿಯಲ್ಲಿ ಉಲ್ಲೇಖಿಸಿರುತ್ತಾರೆ.

ಈ ಪ್ರಕರಣದಲ್ಲಿ ಆರೋಪಿತರಿಂದ ದುರ್ನಡತೆ ಎಸಗಲ್ಪಟ್ಟಿರುವುದನ್ನು ಯಾವುದೇ ಸಂದೇಹಕ್ಕೆ ಆಸ್ಪದ ಇಲ್ಲದಂತೆ ಖಚಿತಪಡಿಸಿದೆ. ಈ ಅಂಶಗಳನ್ನು ಸಮರ್ಥವಾಗಿ ಅಲ್ಲಗಳೆಯುವಂತಹ ಯಾವುದೇ ಮೌಖಿಕ ಅಂಶಗಳನ್ನು ಸಹ ಆರೋಪಿತರು ನಿರೂಪಿಸಿರುವುದಿಲ್ಲ. ವಿಚಾರಣೆಯು ಸಮರ್ಪಕವಾಗಿ ನಡೆದು ಆರೋಪಿತರಿಗೆ ತಮ್ಮ ವಾದವನ್ನು ಮಂಡಿಸಲು ವಿಫುಲ ಅವಕಾಶವನ್ನು ನಿಸಲಾಗಿದೆ. ಈ ಕಛೇರಿಯ ಎರಡನೇ ಕಾರಣ ಕೇಳುವ ನೋಟಿಸ್ ಸಂ: ಡಿಟಿಇ 29 ಡಿಇಕ್ಯೂ(1)2011, ದಿ:07.10.2012ರಲ್ಲಿ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವರದಿಯನ್ನು ಲಗತ್ತಿಸಿ, ಸದರಿಯವರ ವಿರುದ್ಧ ಹೊರಿಸಲಾದ ಆರೋಪವು ಸಾಬೀತಾಗಿದೆಯೆಂದು ಸಲ್ಲಿಸಿರುವ ವರದಿಯನ್ನು ಅಂಗೀಕರಿಸಿ ಏಕೆ ಸೂಕ್ತ ದಂಡನೆ ವಿಧಿಸಬಾರದು ಎಂಬುದರ ಬಗ್ಗೆ ನೋಟಿಸ್ ತಲುಪಿದ 30 ದಿವಸಗಳೊಳಗಾಗಿ ಲಿಖಿತ ಸಮಜಾಯಿಷಿ ಸಲ್ಲಿಸಲು ತಿಳಿಸಲಾಗಿತ್ತು.

ಆದರೆ ಸದರಿ 2ನೇ ಕಾರಣ ಕೇಳುವ ನೋಟಿಸನ್ನು ಸ್ವೀಕರಿಸಿ, ದಿನಾಂಕ:14.12.2012ರಂದು ಸಮಜಾಯಿಷಿ ಯನ್ನು ಸಲ್ಲಿಸಿರುತ್ತಾರೆ. ಸದರಿಯವರ ಸಮಜಾಯಿಷಿಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ, ಶ್ರೀ ಟಿ.ಬಾಬು ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ನಿರ್ದಿಷ್ಟವಾದ ಮತ್ತು ಸ್ಪಷ್ಟವಾದ ಹಾಗೂ ಪುಷ್ಟೀಕರಿಸುವಂತಹ ಯಾವುದೇ ಕಾರಣಗಳನ್ನು ಅಥವಾ ದಾಖಲೆಗಳನ್ನಾಗಲೀ ಸಲ್ಲಿಸಿರುವುದಿಲ್ಲ ಹಾಗೂ ಸದರಿಯವರ ಸೇವಾವದಿಯನ್ನು ಗಮನಿಸಲಾಗಿ ಈ ಹಿಂದೆಯೂ ಸಹ ಹಲವಾರು ಬಾರಿ ಗೈರು ಹಾಜರಾದ ಹಿನ್ನಲೆಯಲ್ಲಿ ಪ್ರಿನ್ಸಿಪಾಲರ ಹಂತದಲ್ಲಿ ಜ್ಞಾಪನಗಳನ್ನು ಜಾರಿಮಾಡಲಾಗಿದ್ದರೂ ಸಹ ಅವರ ವರ್ತನೆಯಲ್ಲಿ ಯಾವುದೇ ಬದಲಾವಣೆ ಆಗಿರುವುದಿಲ್ಲ. ಮತ್ತು ಇವರು ಅನಧಿಕೃತ ಗೈರು ಹಾಜರಿಯ ಹವ್ಯಾಸವನ್ನೇ ಬಳಸಿಕೊಂಡಿರುವುದರಿಂದ ಆರೋಪಿತರು ಸಲ್ಲಿಸಿದ ಸಮಜಾಯಿಷಿಯನ್ನು ಒಪ್ಪದೆ ಅವರ ವಿರುದ್ಧದ ವಿಚಾರಣಾ ವರದಿಯನ್ನು ಅಂಗೀಕರಿಸಿ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಂಡ ಶಿಸ್ತು ಪ್ರಾಧಿಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ನಿರ್ದೇಶಕರ ಆದೇಶ ಸಂಖ್ಯೆ: ಡಿಟಿಇ 29 ಡಿಇಕ್ಯೂ(1)2011, ಬೆಂಗಳೂರು ದಿನಾಂಕ: 20ನೇ ಜುಲೈ, 2013**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಾವಳಿ 1957ರ ನಿಯಮ 8(vi) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರಿ ಜವಳಿ ತಾಂತ್ರಿಕ ಸಂಸ್ಥೆ, ಬೆಂಗಳೂರು ಇಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಟಿ.ಬಾಬು, ದ್ವಿತೀಯ ದರ್ಜೆ ಸಹಾಯಕರು, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ **ಸರ್ಕಾರಿ ಸೇವೆಯಿಂದ ಈ ಮೂಲಕ ಕಡ್ಡಾಯ ನಿವೃತ್ತಿಗೊಳಿಸಿದೆ.**

ಸದರಿಯವರ ಗೈರು ಹಾಜರಾದ ಅವಧಿಯನ್ನು ಕೆಲಸ ಮಾಡದ ದಿನಗಳೆಂದು (Dies non) ಎಂದು ಪರಿಗಣಿಸಿ ಆದೇಶಿಸಲಾಗಿದೆ.

ನಿರ್ದೇಶಕರು
ಹಾಗೂ ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರ
ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು

**P.R. 2370**
**SC.10**

## ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಕಛೇರಿಯ ನಡವಳಿಗಳು

### ಸಂಖ್ಯೆ: ಡಿಟಿಇ 9 ಡಿಇಕ್ಯೂ(2) 2009 ದಿ: 15–07–2013

**ವಿಷಯ:** ಶ್ರೀ ಟಿ.ವಿ. ಹರೀಶ, ಕಛೇರಿ ಸಹಾಯಕರು, ಎಸ್.ಜೆ.ಸರ್ಕಾರಿ ಪಾಲಿಟೆಕ್ನಿಕ್, ಬೆಂಗಳೂರು, ಇವರ ಅನಧಿಕೃತ ಗೈರು ಹಾಜರಿ ಕುರಿತು ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1. ನಿರ್ದೇಶಕರ ಆದೇಶ ಸಂ: ಡಿಟಿಇ 9 ಡಿಇಕ್ಯೂ (2)2009, ದಿ: 28.4.2012.
2. ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿ ದಿ: 30–07–2012.
3. 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಡಿಟಿಇ 9 ಡಿಇಕ್ಯೂ (2)09, ದಿ:30.7.2012, 6.2.2013 (ನೆನಪೋಲೆ)
4. ಶ್ರೀ ಟಿ. ವಿ. ಹರೀಶ, ಕಛೇರಿ ಸಹಾಯಕರು, ಇವರು ಸಲ್ಲಿಸಿರುವ ಸಮಜಾಯಿಷಿ ಪತ್ರ ದಿನಾಂಕ: 28–03–2012, 17.10.2012
5. ಅನಧಿಕೃತ ಗೈರು ಹಾಜರಿಯ ಬಗ್ಗೆ ಪೂರ್ವಭಾವಿ ವಿಚಾರಣೆಗೆ ಹಾಜರಾಗಲು ಸೂಚಿಸಿರುವ ಜ್ಞಾಪನ ದಿ: 23.12.2004, 21.12.2004.
6. ಪ್ರಿನ್ಸಿಪಾಲರು, ಶ್ರೀ ಟಿ. ವಿ. ಹರೀಶ ಇವರಿಗೆ ಜಾರಿ ಮಾಡಲಾದ ಷೋಕಾಸ್ ನೋಟಿಸ್ ದಿನಾಂಕ: 04.04.2003, 08.01.2003
7. ಪ್ರಿನ್ಸಿಪಾಲರು, ಶ್ರೀ ಟಿ.ವಿ. ಹರೀಶ ಇವರಿಗೆ ಜಾರಿ ಮಾಡಲಾದ ಜ್ಞಾಪನಗಳ ದಿನಾಂಕ: 07.07.1999, 25.10.1999, 14.3.2000, 18.10.2000, 03.07.2001, 15.05.2002, 17.09.2002, 11.11.2002, 23.03.2004, 04.06.2004
8. ಪ್ರಿನ್ಸಿಪಾಲರು ನಿರ್ದೇಶಕರಿಗೆ ಬರೆದ ಪತ್ರದ ದಿ: 01.02.2012, 17.04.2012, 28.05.2012, 05.10.2012,
9. ನಿರ್ದೇಶನಾಲಯದ ಅನಧಿಕೃತ ಗೈರು ಹಾಜರಿ ನೋಟಿಸ್ ದಿ: 13.02.2012
10. ಅಂಚೆಯಿಂದ ವಾಪಸ್ಸು ಬಂದ ಲಕೋಟೆ ದಿ: 23.02.2012, 03.04.2012, 21.05.2012
11. ದೋಷಾರೋಪಣ ಪಟ್ಟಿ ದಿ: 31.03.2012
12. ಪತ್ರಿಕೆಯಲ್ಲಿ ಪ್ರಕಟಿಸಲು ವಾರ್ತಾ ಮತ್ತು ಪ್ರಚಾರ ಇಲಾಖೆಗೆ ಬರೆದ ಪತ್ರ ದಿ: 30.05.2012
13. ಕರ್ನಾಟಕಾದ್ಯಂತ ಪ್ರಜಾವಾಣಿ ಮತ್ತು ವಿಜಯ ಕರ್ನಾಟಕ ಪತ್ರಿಕೆಗಳಲ್ಲಿ ಪ್ರಕಟಿಸಿದ ದಿ: 02.06.2012.
14. ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957.
15. ಕರ್ನಾಟಕ ನಾಗರೀಕ ಸೇವಾ ನಡತೆ (ವರ್ತನೆ) ನಿಯಮಗಳು 1966ರ ಸಾಮಾನ್ಯ ನಿಯಮ 1) (i), (ii), (iii)

**ಪ್ರಸ್ತಾವನೆ:**

ಎಸ್.ಜೆ. ಸರ್ಕಾರಿ ಪಾಲಿಟೆಕ್ನಿಕ್, ಬೆಂಗಳೂರು ಇಲ್ಲಿ ಕಛೇರಿ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಟಿ.ವಿ. ಹರೀಶ ಇವರು ದಿ: 26.01.2010ರಿಂದ ಇಲ್ಲಿಯವರೆವಿಗೂ ಸುಮಾರು 3 ವರ್ಷ 5 ತಿಂಗಳಿಗೂ ಹೆಚ್ಚು ಕಾಲ ಅನಧಿಕೃತ ಗೈರು ಹಾಜರಾದ ಬಗ್ಗೆ ಸಂಸ್ಥೆಯ ಪ್ರಿನ್ಸಿಪಾಲರು ಬರೆದ ಪತ್ರದ ಅನುಸಾರ ಸದರಿಯವರಿಗೆ ಇಲಾಖಾ ವತಿಯಿಂದ ಕಾರಣ ಕೇಳುವ ನೋಟೀಸು ಜಾರಿ ಮಾಡಲಾಗಿ, ಕಾರಣ ಕೇಳುವ ನೋಟೀಸಿಗೆ ಯಾವುದೇ ಸಮಜಾಯಿಷಿಯನ್ನು ಸಲ್ಲಿಸದೇ ಇರುವುದರಿಂದ ಶಿಸ್ತು ಪ್ರಾಧಿಕಾರವು ಸದರಿಯವರ ವಿರುದ್ಧ ದೋಷಾರೋಪಣ ಪಟ್ಟಿ ಜಾರಿ ಮಾಡಲಾಗಿ, ದೋಷಾರೋಪಣ ಪಟ್ಟಿಗೂ ಸಹ ಯಾವುದೇ ಪ್ರತ್ಯುತ್ತರ ಸಲ್ಲಿಸದೇ ಇದ್ದ ಕಾರಣ ನಿಯಮಾನುಸಾರ ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಎ.ಕೃಷ್ಣಪ್ಪ ಇವರನ್ನು ನೇಮಿಸಿ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಲಯಿತು. ಮುಂದುವರೆದು ನಿವೃತ್ತ ಜಿಲ್ಲಾ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ವಿಚಾರಣೆಗೆ ಹಾಜರಾಗಲು ನೋಟೀಸ್ ಜಾರಿ ಮಾಡಲಾಗಿ ಸದರಿ ನೋಟೀಸು ಸಹ ಅಂಚೆಯಿಂದ ವಾಪಸ್ಸು ಬಂದಿರುತ್ತದೆ. ಏತನ್ಮಧ್ಯೆ ವಿಚಾರಣಾಧಿಕಾರಿಗಳು ಆದೇಶಿಸಿದಂತೆ ದಿನಪತ್ರಿಕೆಗಳಲ್ಲಿ ಪ್ರಕಟಿಸಲು ತಿಳಿಸಿದ ಹಿನ್ನಲೆಯಲ್ಲಿ ದಿನಾಂಕ: 02.06.2012ರಂದು ಪ್ರಜಾವಾಣಿ ಹಾಗೂ ವಿಜಯ ಕರ್ನಾಟಕ ದಿನಪತ್ರಿಕೆಗಳಲ್ಲಿ (ಕರ್ನಾಟಕ ರಾಜ್ಯದಾದ್ಯಂತ) ಪ್ರಕಟಿಸಲಾಯಿತು. ದಿನಪತ್ರಿಕೆಯಲ್ಲಿ ಪ್ರಕಟಿಸಿದನ್ನು ಗಮನಿಸಿದ ಅವರ ಪತ್ನಿ ಶ್ರೀಮತಿ ಗಾಯತ್ರಿಯವರು ವಿಚಾರಣಾಧಿಕಾರಿಯವರ ಮುಂದೆ ಹಾಜರಾಗಿ ನನ್ನ ಗಂಡ ಎರಡು ವರ್ಷಗಳಿಂದ ಕಾಣೆಯಾಗಿದ್ದಾರೆಂದು, ಮತ್ತು ಇನ್ನಿತರೆ ಅಹವಾಲುಗಳೊಂದಿಗೆ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿದರು. ಅವರ ಸಮಜಾಯಿಷಿಯನ್ನು ಒಪ್ಪದ ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಮುಂದುವರೆಸಿದಾಗ ದಿನಾಂಕ: 28.04.2012ರಂದು ಶ್ರೀ ಟಿ.ವಿ.ಹರೀಶ್ ರವರು ನ್ಯಾಯಾಧೀಶರ ಮುಂದೆ ವಿಚಾರಣೆಗೆ ಹಾಜರಾದರು. ಆರೋಪಿತರ ಮತ್ತು ಸಾಕ್ಷಿಗಳ ವಿಚಾರಣೆಯನ್ನು ಪೂರ್ಣಗೊಳಿಸಿದ ಮಾನ್ಯ ನ್ಯಾಯಾಧೀಶರು, ದಿನಾಂಕ: 30.07.2012ರಂದು ಅಂತಿಮ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಿಚಾರಣಾ ವರದಿಯಲ್ಲಿ ಈ ಕೆಳಕಂಡಂತೆ ಆರೋಪಗಳನ್ನು ವರದಿ ಸಲ್ಲಿಸಿರುತ್ತಾರೆ.

ಆಪಾದಿತರ ವಿರುದ್ಧ ಮಾಡಿದ ಆರೋಪವನ್ನು ಗಮನಿಸಲಾಗಿ ಆಪಾದಿತರು ದಿನಾಂಕ: 26–1–2010ರಿಂದ ಇಲ್ಲಿಯವರೆವಿಗೂ ಕರ್ತವ್ಯಕ್ಕೆ ವೈಯಕ್ತಿಕ ಕಾರಣದಿಂದಾಗಿ, ಅನಧಿಕೃತ ಗೈರು ಹಾಜರಾದ ಬಗ್ಗೆ ಒಪ್ಪಿಕೊಂಡಿರುತ್ತಾರೆ. ಆದರೆ, ಅವರು ಗೈರು ಹಾಜರಾಗಿರುವುದರಿಂದ ಯಾವ ನಿರ್ದಿಷ್ಟವಾದ ಕಾರಣವನ್ನಾಗಲೀ ಅಥವಾ ಕರ್ತವ್ಯಕ್ಕೆ ಹಾಜರಾಗಲು ಯಾವ ಅಡಚಣೆ ಇತ್ತು ಎಂಬುದನ್ನು ನಿರ್ದಿಷ್ಟವಾಗಿ ಹೇಳಿರುವುದಿಲ್ಲ. ಆದುದರಿಂದ ಅವರ ರಕ್ಷಣಾ ಹೇಳಿಕೆಯನ್ನು ಒಪ್ಪಲು ಸಾಧ್ಯವಿಲ್ಲ.

ಆಪಾದಿತರು ದಿನಾಂಕ:26–1–2010ರಿಂದ ಇಲ್ಲಿನವರೆವಿಗೂ ಅನಧಿಕೃತ ಗೈರು ಹಾಜರಾಗಿರುವುದು ನನ್ನ ಅಭಿಪ್ರಾಯದಲ್ಲಿ ಅವರೊಬ್ಬರು ಸರ್ಕಾರಿ ನೌಕರನಲ್ಲದ ರೀತಿಯಲ್ಲಿ ನಡೆದುಕೊಂಡಿರುತ್ತಾರೆ ಎಂಬುದಾಗಿದೆ. ಆಪಾದಿತ ನೌಕರರು ತನ್ನ ಕರ್ತವ್ಯಕ್ಕೆ ಗೈರು ಹಾಜರಾಗಿರುವುದರ ಬಗ್ಗೆ ಕರ್ನಾಟಕ ಹೈಕೋರ್ಟಿನ ತೀರ್ಪನ್ನು ಕೆಳಕಂಡಂತೆ ಉಲ್ಲೇಖಿಸಿರುತ್ತಾರೆ.

It has been observed by the Hon'ble High Court of Karnataka in a decision reported in 1996 – I CLR 188 (between Doddaraju v/s. Dist. & sess. Judge) as follows:

"Misconduct- of unauthorized absence- Has almost become chronic- The same will have to be viewed at very seriously and is not to be taken lightly-Employer will be fully justified in getting rid of irresponsible employees committing such misconduct and filling those posts with more worthy candidate."

In the light of the above said decision, in sum and substance the unauthorized absence of the delinquent amounts to misconduct.

ಈ ಮೇಲಿನ ಹೈಕೋರ್ಟ್ ತೀರ್ಪು ನನ್ನ ಅಭಿಪ್ರಾಯದಲ್ಲಿ ಈ ಪ್ರಕರಣದ ಸಂದರ್ಭ ಸನ್ನಿವೇಶಕ್ಕೆ ಹೊಂದಿಕೊಳ್ಳುತ್ತದೆ ಎಂಬುದಾಗಿದೆ. ಕೊನೆಯದಾಗಿ ಮೇಲಿನ ಎಲ್ಲಾ ಸಕಾಲದಿಂದಾಗಿ ಆಪಾದಿತರ ವಿರುದ್ಧ ಆರೋಪ ಸಾಬೀತಾಗಿರುತ್ತದೆ ಎಂದು ತೀರ್ಮಾನಿಸಿ ಅಂತಿಮ ವರದಿಯನ್ನು ದಿನಾಂಕ:30–7–2012ರಂದು ಸಲ್ಲಿಸಿರುತ್ತಾರೆ.

ಏತನ್ಮಧ್ಯೆ ವರದಿ ಪರಿಶೀಲಿಸಿದ ಶಿಸ್ತು ಪ್ರಾಧಿಕಾರವು ನಿಯಮಾನುಸಾರ ದಿನಾಂಕ:30–7–2012ರಂದು ಎರಡನೇ ಕಾರಣ ಕೇಳುವ ನೋಟೀಸಿನ ಮೂಲಕ ವಿಚಾರಣಾ ಅಂತಿಮ ವರದಿಯನ್ನು ಲಗತ್ತಿಸಿ ಜಾರಿ ಮಾಡಲಾಯಿತು.

ವರದಿಯನ್ನು ಸ್ವೀಕರಿಸಿದ ಶ್ರೀ ಟಿ.ವಿ. ಹರೀಶ್‌ರವರು ದಿನಾಂಕ:28–8–2012ರಂದು ನಿರ್ದೇಶಕರಿಗೆ ಒಂದು ಸಮಜಾಯಿಷಿಯನ್ನು ಸಲ್ಲಿಸಿ ನಾನು ನನ್ನ ವೈಯಕ್ತಿಕ ಕಾರಣದಿಂದ ನಾನು ಅನಧಿಕೃತ ಗೈರು ಹಾಜರಾಗಿದ್ದೆ, ಅದರಿಂದ ನನಗೆ ನನ್ನ ತಪ್ಪು ಅರಿವಾಗಿದೆ. ಇನ್ನು ಮುಂದೆ ಅನುಮತಿ ಇಲ್ಲದೆ ಕಛೇರಿ ಕೆಲಸಕ್ಕೆ ಗೈರು ಹಾಜರಾಗುವುದಿಲ್ಲ ಎಂಬಿತ್ಯಾದಿ ವಿವರಣೆಗಳೊಂದಿಗೆ ಯಾವುದೇ ಮಹತ್ವದ ದಾಖಲೆಗಳನ್ನಾಗಲಿ ಸಲ್ಲಿಸದೆ ಸಮಜಾಯಿಷಿಯನ್ನು ಸಲ್ಲಿಸಿರುತ್ತಾರೆ. ಸದರಿಯವರ ಅನಧಿಕೃತ ಗೈರು ಹಾಜರಿಯ ಇಲಾಖಾ ವಿಚಾರಣೆಯ ಅಂತಿಮ ವರದಿ ಮತ್ತು ಅವರ ಸೇವಾವಧಿಯ ವಿವರಗಳನ್ನು ಹಾಗೂ ಅವರ ಸೇವಾ ಪುಸ್ತಕವನ್ನು ಪರಿಶೀಲಿಸಲಾಗಿ, **ದಿನಾಂಕ:3–9–1998ರಲ್ಲಿ ಎಸ್.ಜೆ. ಸರ್ಕಾರಿ ಪಾಲಿಟೆಕ್ನಿಕ್ ನಲ್ಲಿ ಕಾರ್ಯವರದಿ ಮಾಡಿಕೊಂಡ ದಿನಾಂಕದಿಂದ ಇಂದಿನವರೆವಿಗೂ ಅವರ ಅನಧಿಕೃತ ಗೈರು ಹಾಜರಿಯೇ ಎದ್ದು ಕಾಣುತ್ತಿದೆ ಹಾಗೂ ಅವರ ಖಾಯಂ ಪೂರ್ವಾವಧಿ ಕೂಡ ಘೋಷಣೆಯಾಗಿರುವುದಿಲ್ಲ.**

ಆದ್ದರಿಂದ ಆರೋಪಿಯ ಸಮಜಾಯಿಷಿಯನ್ನು ಒಪ್ಪದೇ ಆರೋಪಗಳು ಸಾಬೀತಾಗಿದೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಂಡ ಶಿಸ್ತು ಪ್ರಾಧಿಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ನಿರ್ದೇಶಕರ ಆದೇಶ ಸಂಖ್ಯೆ: ಡಿಟಿಇ 09 ಡಿಇಕ್ಯೂ(2) 2009, ಬೆಂಗಳೂರು ದಿನಾಂಕ: 11 ನೇ ಜುಲೈ 2013.**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಾವಳಿ 1957ರ ನಿಯಮ 8(vi) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎಸ್.ಜೆ.ಸರ್ಕಾರಿ ಪಾಲಿಟೆಕ್ನಿಕ್, ಬೆಂಗಳೂರು ಇಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಟಿ.ವಿ. ಹರೀಶ್, ಕಛೇರಿ ಸಹಾಯಕರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ **ಸರ್ಕಾರಿ ಸೇವೆಯಿಂದ ವಜಾಗೊಳಿಸಲಾಗಿದೆ.**

ಅಲ್ಲದೇ ಸದರಿಯವರ ಅನಧಿಕೃತ ಗೈರುಹಾಜರಿ ದಿನಾಂಕ:26–1–2010 ರಿಂದ ಇದುವರೆಗೂ ಈ ಆದೇಶದ ದಿನಾಂಕದವರೆಗಿನ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 8 ಉಪನಿಯಮ 14(ಎ) ಪ್ರಕಾರ ಲೆಕ್ಕಕ್ಕಿಲ್ಲದ ಅವಧಿ (Dies Non) ಅವಧಿ ಎಂದು ಪರಿಗಣಿಸಲಾಗಿದೆ.

ನಿರ್ದೇಶಕರು
ಹಾಗೂ ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರ
ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು

**PR.2432**
**SC.10**

## ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಕಛೇರಿಯ ನಡವಳಿಗಳು

**ಸಂಖ್ಯೆ: ಡಿಟಿಇ 5 ಡಿಇಕ್ಯೂ(2) 2004, ದಿ: 12–07–2013**

**ವಿಷಯ:** ಶ್ರೀ ಹೆಚ್.ಆರ್. ಪ್ರಭಾಕರ, ಸಹ ಬೋಧಕರು, ಸರ್ಕಾರಿ ಪಾಲಿಟೆಕ್ನಿಕ್, ಬಾಗೇಪಲ್ಲಿ, ಇವರ ಅನಧಿಕೃತ ಗೈರು ಹಾಜರಿ ಕುರಿತು ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1. ಪ್ರಿನ್ಸಿಪಾಲರು, ಹೆಚ್.ಆರ್.ಪ್ರಭಾಕರ ಇವರಿಗೆ ಜಾರಿ ಮಾಡಲಾದ ಷೋಕಾಸ್ ನೋಟಿಸ್ ಮತ್ತು ಜ್ಞಾಪನ ದಿನಾಂಕ: 13.5.2008, 26.4.2008 ಮತ್ತು 17.3.2011.
2. ಪ್ರಿನ್ಸಿಪಾಲರು ನಿರ್ದೇಶಕರಿಗೆ ಬರೆದ ಪತ್ರ ದಿನಾಂಕ: 30.8.2004, 10.1.2007, 14.5.2011, 30.1.2012
3. ಅನಧಿಕೃತ ಗೈರು ಹಾಜರಿ ನೋಟೀಸ್ ದಿನಾಂಕ: 13.2.2012.
4. ಹೆಚ್.ಆರ್.ಪ್ರಭಾಕರ್ ಇವರ ಸಮಜಾಯಿಷಿ ಪತ್ರ ದಿನಾಂಕ:12.3.2012.
5. ನಿರ್ದೇಶಕರಿಂದ ಕಾರಣ ಕೇಳುವ ನೋಟೀಸ್ ದಿನಾಂಕ: 31.3.2012.
6. ದೋಷಾರೋಪಣ ಪಟ್ಟಿ ದಿನಾಂಕ: 2.8.2012.
7. ಹೆಚ್.ಆರ್.ಪ್ರಭಾಕರ್ ಇವರ ದೋಷಾರೋಪಣ ಪಟ್ಟಿಗೆ ಸಮಜಾಯಿಷಿ ದಿನಾಂಕ:7.9.2012
8. ವಿಚಾರಣಾಧಿಕಾರಿಯವರ ನೇಮಕಾತಿ ಆದೇಶ ಸಂ: ಡಿಟಿಇ 5 ಡಿಇಕ್ಯೂ(2)2004, ದಿ: 03.10.2012.
9. ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿ ದಿನಾಂಕ: 01.02.2013.
10. 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಡಿಟಿಇ/5/ಡಿಇಕ್ಯೂ(2)04, ದಿ:28.2.2013.
11. ಹೆಚ್.ಆರ್.ಪ್ರಭಾಕರ್ ರವರ ಸಮಜಾಯಿಷಿ ಪತ್ರ ದಿನಾಂಕ: 30.4.2013.

**ಪ್ರಸ್ತಾವನೆ:**

ಸರ್ಕಾರಿ ಪಾಲಿಟೆಕ್ನಿಕ್, ಬಾಗೇಪಲ್ಲಿ ಇಲ್ಲಿ ಸಹ ಬೋಧಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಹೆಚ್.ಆರ್. ಪ್ರಭಾಕರ ಇವರು ದಿ:4–4–2008ರಿಂದ ಇಲ್ಲಿಯವರೆವಿಗೂ ಸುಮಾರು 5ವರ್ಷಗಳಿಗೂ ಹೆಚ್ಚು ಕಾಲ ಅನಧಿಕೃತ ಗೈರು ಹಾಜರಾದ ಬಗ್ಗೆ ಸಂಸ್ಥೆಯ ಪ್ರಿನ್ಸಿಪಾಲರು ಬರೆದ ಪತ್ರಗಳ ಅನುಸಾರ ಸದರಿಯವರಿಗೆ ಇಲಾಖಾ ವತಿಯಿಂದ ಅನಧಿಕೃತ ಗೈರು ಹಾಜರಿ ನೋಟೀಸು ಹಾಗೂ ಕಾರಣ ಕೇಳುವ ನೋಟೀಸು ಜಾರಿ ಮಾಡಲಾಗಿ, ಕಾರಣ ಕೇಳುವ

ನೋಟೀಸಿಗೆ ಯಾವುದೇ ಸಮಜಾಯಿಷಿಯನ್ನು ಸಲ್ಲಿಸದೇ ಇರುವುದರಿಂದ ಶಿಸ್ತು ಪ್ರಾಧಿಕಾರವು ಸದರಿಯವರ ವಿರುದ್ಧ ದೋಷಾರೋಪಣ ಪಟ್ಟಿಯನ್ನು ದಿನಾಂಕ: 2–8–2012ರಂದು ಜಾರಿ ಮಾಡಲಾಯಿತು. ದೋಷಾರೋಪಣ ಪಟ್ಟಿಗೆ ದಿನಾಂಕ:7–9–2012ರಂದು ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿದರು. ಸದರಿ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರವು ನಿಯಮಾನುಸಾರ ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ ಎ.ಕೃಷ್ಣಪ್ಪ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಲಾಯಿತು. ಮುಂದುವರೆದು ನಿವೃತ್ತ ಜಿಲ್ಲಾ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ವಿಚಾರಣೆಗೆ ಹಾಜರಾಗಲು ನೋಟೀಸ್ ಜಾರಿ ಮಾಡಿದ ನಂತರ ವಿಚಾರಣೆಗೆ ಹಾಜರಾಗಿರುತ್ತಾರೆ. ಆರೋಪಿತರ ಮತ್ತು ಸಾಕ್ಷಿಗಳ ವಿಚಾರಣೆಯನ್ನು ಪೂರ್ಣಗೊಳಿಸಿದ ನ್ಯಾಯಾಧೀಶರು, ದಿನಾಂಕ: 1–2–2013ರಂದು ಅಂತಿಮ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಏತನ್ಮಧ್ಯೆ ವರದಿ ಪರಿಶೀಲಿಸಿದ ಶಿಸ್ತು ಪ್ರಾಧಿಕಾರವು ನಿಯಮಾನುಸಾರ ದಿನಾಂಕ:28–2–2013ರಂದು ಎರಡನೇ ಕಾರಣ ಕೇಳುವ ನೋಟೀಸಿನ ಮೂಲಕ ವಿಚಾರಣಾ ಅಂತಿಮ ವರದಿಯನ್ನು ಲಗತ್ತಿಸಿ ಜಾರಿ ಮಾಡಲಾಯಿತು. ವರದಿಯನ್ನು ಸ್ವೀಕರಿಸಿದ ಶ್ರೀ ಹೆಚ್.ಆರ್.ಪ್ರಭಾಕರ್‌ರವರು ದಿನಾಂಕ: 30–4–2013ರಂದು ಸಮಜಾಯಿಷಿಯನ್ನು ಸಲ್ಲಿಸಿ, ನಾನು ದಿನಾಂಕ: 4–4–2008ರಿಂದ, ಕಾರಣಾಂತರಗಳಿಂದ ಕರ್ತವ್ಯಕ್ಕೆ ಗೈರು ಹಾಜರಾಗಿ ಕರ್ತವ್ಯಕ್ಕೆ ಅಡಚಣೆ ಉಂಟು ಮಾಡಿರುತ್ತೇನೆ. ಇನ್ನು ಮುಂದೆ ಕರ್ತವ್ಯವನ್ನು ಮಾಡಿಕೊಂಡು ಹೋಗುತ್ತೇನೆ ಎಂದು ತಪ್ಪಿದ್ದಲ್ಲಿ ಸೂಕ್ತ ಕ್ರಮ ಕೈಗೊಳ್ಳಬಹುದೆಂದು ಸಮಜಾಯಿಷಿಯಲ್ಲಿ ಮನವಿ ಮಾಡಿಕೊಂಡಿರುತ್ತಾರೆ. ವಿಚಾರಣಾ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಿಚಾರಣಾ ವರದಿಯಲ್ಲಿ ಈ ಕೆಳಕಂಡಂತೆ ವರದಿ ಮಾಡಿರುತ್ತಾರೆ.

ಆಪಾದಿತರ ವಿರುದ್ಧ ಮಾಡಿದ ಆರೋಪವನ್ನು ಗಮನಿಸಲಾಗಿ ಆಪಾದಿತರು ದಿನಾಂಕ: 4–4–2008ರಿಂದ ಇಲ್ಲಿಯವರೆವಿಗೂ ಕರ್ತವ್ಯಕ್ಕೆ ವೈಯಕ್ತಿಕ ಕಾರಣದಿಂದಾಗಿ ಅನಧಿಕೃತ ಗೈರು ಹಾಜರಾದ ಬಗ್ಗೆ ಒಪ್ಪಿಕೊಂಡಿರುತ್ತಾರೆ. ಆದರೆ, ಅವರು ಗೈರು ಹಾಜರಾಗಿರುವುದರಿಂದ ಯಾವ ನಿರ್ದಿಷ್ಟವಾದ ಕಾರಣವನ್ನಾಗಲೀ ಅಥವಾ ಕರ್ತವ್ಯಕ್ಕೆ ಹಾಜರಾಗಲು ಯಾವ ಅಡಚಣೆ ಇತ್ತು ಎಂಬುದನ್ನು ನಿರ್ದಿಷ್ಟವಾಗಿ ಹೇಳಿರುವುದಿಲ್ಲ. ಆದುದರಿಂದ ಅವರ ರಕ್ಷಣಾ ಹೇಳಿಕೆಯನ್ನು ಒಪ್ಪಲು ಸಾಧ್ಯವಿಲ್ಲ. ಆಪಾದಿತರು ದಿನಾಂಕ:4–4–2008ರಿಂದ ಇಲ್ಲಿಯವರೆವಿಗೂ ಅನಧಿಕೃತ ಗೈರು ಹಾಜರಾಗಿರುವುದು ನನ್ನ ಅಭಿಪ್ರಾಯದಲ್ಲಿ ಅವರೊಬ್ಬರು ಸರ್ಕಾರಿ ನೌಕರನಲ್ಲದ ರೀತಿಯಲ್ಲಿ ನಡೆದುಕೊಂಡಿರುತ್ತಾರೆ ಎಂಬುದಾಗಿದೆ. ಆಪಾದಿತ ನೌಕರರು ತನ್ನ ಕರ್ತವ್ಯಕ್ಕೆ ಗೈರು ಹಾಜರಾಗಿರುವುದರ ಬಗ್ಗೆ ಕರ್ನಾಟಕ ಹೈಕೋರ್ಟಿನ ತೀರ್ಪನ್ನು ಕೆಳಕಂಡಂತೆ ಉಲ್ಲೇಖಿಸಿರುತ್ತಾರೆ.

It has been observed by the Hon'ble High Court of Karnataka in a decision reported in 1996 – I CLR 188 (between Doddaraju v/s. Dist. & sess. Judge) as follows:

"Misconduct- of unauthorized absence- Has almost become chronic- The same will have to be viewed at very seriously and is not to be taken lightly-Employer will be fully justified in getting rid of irresponsible employees committing such misconduct and filling those posts with more worthy candidate."

ಈ ಮೇಲಿನ ಹೈಕೋರ್ಟ್ ತೀರ್ಪು ನನ್ನ ಅಭಿಪ್ರಾಯದಲ್ಲಿ ಈ ಪ್ರಕರಣದ ಸಂದರ್ಭ ಸನ್ನಿವೇಶಕ್ಕೆ ಹೊಂದಿಕೊಳ್ಳುತ್ತದೆ ಎಂಬುದಾಗಿದೆ. ಕೊನೆಯದಾಗಿ ಮೇಲಿನ ಎಲ್ಲಾ ಸಕಾಲದಿಂದಾಗಿ ಆಪಾದಿತರ ವಿರುದ್ಧ ಆರೋಪ ಸಾಬೀತಾಗಿರುತ್ತದೆ ಎಂದು ತೀರ್ಮಾನಿಸಿ ಅಂತಿಮ ವರದಿಯನ್ನು ದಿನಾಂಕ:1–2–2013ರಂದು ವಿಚಾರಣಾಧಿಕಾರಿಗಳು ವರದಿ ಮಾಡಿರುತ್ತಾರೆ.

ಅಲ್ಲದೆ ಈ ಹಿಂದೆಯೂ ಸಹ ದಿನಾಂಕ:7–10–2004ರಲ್ಲಿ ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ದೋಷಾರೋಪಣ ಪಟ್ಟಿ ಜಾರಿ ಮಾಡಲಾಗಿ, ಲಿಖಿತ ಸಮಜಾಯಿಷಿಯನ್ನು ಕೇಳಿರುತ್ತಾರೆ. ಸದರಿ ದೋಷಾರೋಪಣ ಪಟ್ಟಿಗೆ ದಿನಾಂಕ:20–11–2004ರಲ್ಲಿ ಸಮಜಾಯಿಷಿ ಸಲ್ಲಿಸಿ, ನಾನು ದಿನಾಂಕ: 9–2–2004ರಿಂದ ದಿನಾಂಕ:21–7–2004ರ ವರೆಗೆ ಕರ್ತವ್ಯಕ್ಕೆ ಹಾಜರಾಗಲು ಸಾಧ್ಯವಾಗಲಿಲ್ಲ. ನನ್ನ ಆರೋಗ್ಯ ಸರಿಯಿಲ್ಲದ ಕಾರಣ ನಾನು ವೈದ್ಯಕೀಯ ಶುಶ್ರೂಷೆ ಪಡೆಯುತ್ತಿದ್ದೆ ಎಂಬಿತ್ಯಾದಿ ವಿವರಣೆಗಳೊಂದಿಗೆ ಸಲ್ಲಿಸಿರುವ ಸಮಜಾಯಿಷಿಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಶಿಸ್ತು ಪ್ರಾಧಿಕಾರವು ದಿನಾಂಕ:17–2–2005ರಲ್ಲಿ ಒಂದು ಆದೇಶವನ್ನು ಹೊರಡಿಸಿ ಆ ಆದೇಶದಲ್ಲಿ ಕರ್ನಾಟಕ ಸೇವಾ ನಿಯಮಾವಳಿಯ 108 ನ್ನು ಉಲ್ಲಂಘಿಸಿದ್ದ ಕಾರಣಕ್ಕಾಗಿ ಇವರಿಗೆ ಕೆಸಿಎಸ್ (ಸಿಸಿಎ) ನಿಯಮಾವಳಿ 1957 ರಲ್ಲಿನ ನಿಯಮ 8(3) ರನ್ವಯ ಲಘು ದಂಡನೆಯಾಗಿ ಒಂದು ವಾರ್ಷಿಕ ವೇತನ ಬಡ್ತಿಯನ್ನು ಅಸಂಚಿತವಾಗಿ ತಡೆ ಹಿಡಿದು ಆದೇಶಿಸಲಾಗಿತ್ತು. ಇಷ್ಟಾದರೂ ಸಹ ಇವರ ವರ್ತನೆಯಲ್ಲಿ ಯಾವುದೇ ಬದಲಾವಣೆ ಮಾಡಿಕೊಂಡಿರುವುದಿಲ್ಲ. ಹಾಗೂ ಇವರ ಅನಧಿಕೃತ ಗೈರು ಹಾಜರಿ ಅವಧಿಯ ಇಲಾಖಾ ವಿಚಾರಣೆಯ ಅಂತಿಮ ವರದಿ ಮತ್ತು ಅವರ ಸೇವಾವಧಿಯ ವಿವರಗಳನ್ನು ಪರಿಶೀಲಿಸಲಾಗಿ, ಇವರ ಸೇವಾ ಅವಧಿ ಪೂರ್ಣ ಅವರ ಅನಧಿಕೃತ ಗೈರು ಹಾಜರಿಯೇ ಎದ್ದು ಕಾಣುತ್ತಿದೆ. ಆದ್ದರಿಂದ ಆರೋಪಿಯು ದಿನಾಂಕ:30–4–2013ರಂದು ಸಲ್ಲಿಸಿರುವ ಸಮಜಾಯಿಷಿಯನ್ನು, ಒಪ್ಪದೇ ಆರೋಪಗಳು ಸಾಬೀತಾಗಿದೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಂಡ ಶಿಸ್ತು ಪ್ರಾಧಿಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ನಿರ್ದೇಶಕರ ಆದೇಶ ಸಂಖ್ಯೆ: ಡಿಟಿಇ 05 ಡಿಇಕ್ಯೂ(2) 2004, ಬೆಂಗಳೂರು ದಿನಾಂಕ: 7 ನೇ ಜುಲೈ 2013.**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಾವಳಿ 1957ರ ನಿಯಮ 8(vi) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರಿ ಪಾಲಿಟೆಕ್ನಿಕ್, ಬಾಗೇಪಲ್ಲಿ ಇಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಹೆಚ್.ಆರ್.ಪ್ರಭಾಕರ್, ಸಹ ಬೋಧಕರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ **ಸರ್ಕಾರಿ ಸೇವೆಯಿಂದ ಈ ಮೂಲಕ ಕಡ್ಡಾಯ ನಿವೃತ್ತಿಗೊಳಿಸಿದೆ.**

ಅಲ್ಲದೇ ಸದರಿಯವರ ಅನಧಿಕೃತ ಗೈರುಹಾಜರಿ ದಿನಾಂಕ:4–4–2008ರಿಂದ ಈವರೆಗಿನ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 8 ಉಪನಿಯಮ 14(ಎ) ಪ್ರಕಾರ ಲೆಕ್ಕಕ್ಕಿಲ್ಲದ ಅವದಿ (Dies Non) ಎಂದು ಪರಿಗಣಿಸಲಾಗಿದೆ.

ನಿರ್ದೇಶಕರು
ಹಾಗೂ ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರ
ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು

**PR.2433**
**SC.10**

## ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಕಛೇರಿಯ ನಡವಳಿಗಳು

**ವಿಷಯ:** ಶ್ರೀ ರವಿ ನಾಯ್ಕ, ದ್ವಿತೀಯ ದರ್ಜೆ ಸಹಾಯಕರು, ಸರ್ಕಾರಿ ಪಾಲಿಟೆಕ್ನಿಕ್, ಕಾರವಾರ, (ಹಾಲಿ ಅಮಾನತ್ತಿನಲ್ಲಿರುವ) ಇವರ ದುರ್ನಡತೆ ಕುರಿತಂತೆ ಅಂತಿಮ ಆದೇಶ ಹೊರಡಿಸುವ ಬಗ್ಗೆ.

ಓದಲಾಗಿದೆ:

1. ಪ್ರಿನ್ಸಿಪಾಲರು, ಸರ್ಕಾರಿ ಪಾಲಿಟೆಕ್ನಿಕ್, ಕಾರವಾರ, ಇವರು ಶ್ರೀ ರವಿ ನಾಯ್ಕ ಇವರಿಗೆ ಜಾರಿ ಮಾಡಲಾದ ಜ್ಞಾಪನ ದಿ: 25.10.2012, 07.11.2012
2. ಪ್ರಿನ್ಸಿಪಾಲರು, ಸರ್ಕಾರಿ ಪಾಲಿಟೆಕ್ನಿಕ್, ಕಾರವಾರ, ಇವರು ಪೋಲೀಸ್ ಸಬ್ ಇನ್ಸಪೆಕ್ಟರ್, ನಗರ ಪೋಲೀಸ್ ಠಾಣೆ, ಕಾರವಾರ ಇವರ ಪತ್ರ ದಿ: 07.11.2012.
3. ಪ್ರಿನ್ಸಿಪಾಲರು,ಸರ್ಕಾರಿ ಪಾಲಿಟೆಕ್ನಿಕ್, ಕಾರವಾರ, ಇವರು ನಿರ್ದೇಶಕರಿಗೆ ಬರೆದ ಅರೆ ಸರ್ಕಾರಿ ಪತ್ರ ದಿ: 08.11.2012, 15.11.2012.
4. ಕಾರವಾರ ಶಹರ ಪೋಲೀಸ್ ಠಾಣೆ ಇವರು ಪ್ರಿನ್ಸಿಪಾಲರಿಗೆ ಬರೆದ ಪತ್ರ ದಿ: 08.11.2012.
5. ರವಿ ನಾಯ್ಕ ಇವರನ್ನು ಅಮಾನತ್ತು ಮಾಡಿದ ಈ ಕಛೇರಿಯ ಆದೇಶ ಸಂ: ಡಿಟಿಇ:05:ಡಿಇಕ್ಯೂ (1):2007, ದಿ: 29.11.2012.
6. ದೋಷಾರೋಪಣೆ ಪಟ್ಟಿ ದಿ: 23.01.2013.
7. ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ನೇಮಕ ಮಾಡಿದ ಆದೇಶ ದಿ: 13.02.2013.
8. ವಿಚಾರಣಾಧಿಕಾರಿಗಳ ಅಂತಿಮ ವರದಿ ದಿ: 25.05.2013.
9. ವರದಿ ಲಗತ್ತಿಸಿ ಜಾರಿ ಮಾಡಲಾದ ಎರಡನೇ ಕಾರಣ ಕೇಳುವ ನೋಟೀಸು ದಿ: 10.06.2013.
10. ಸದರಿ ನೌಕರರು ಎರಡನೇ ಕಾರಣ ಕೇಳುವ ನೋಟೀಸಿಗೆ ಸಲ್ಲಿಸಿದ ಸಮಜಾಯಿಷಿ ದಿ: 23.07.2013.

**ಪ್ರಸ್ತಾವನೆ;**

ಸರ್ಕಾರಿ ಪಾಲಿಟೆಕ್ನಿಕ್, ಕಾರವಾರ ಇಲ್ಲಿ ದ್ವಿತೀಯ ದರ್ಜೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದ **ಶ್ರೀ ರವಿ ನಾಯ್ಕ** (ಹಾಲಿ ಅಮಾನತ್ತಿನಲ್ಲಿರುವ) ಇವರು ದಿ: 07.11.2012 ರಿಂದು ಸುಮಾರು 4.00 ಗಂಟೆಗೆ ಸಾರಾಯಿ ಕುಡಿದ ಅಮಲಿನಲ್ಲಿ ಕಾಲೇಜಿಗೆ ಬಂದು ಕಾಲಿನ ಶೂ ಹಾಗೂ ಕಾಲಿನ ಚೀಲದಲ್ಲಿ ಹರಿತವಾದ ಚಾಕು ತಂದು ಕಛೇರಿಯಲ್ಲಿ ಕೆಲಸ ಮಾಡುವ ಸಿಬ್ಬಂದಿಗಳಿಗೆ ತೋರಿಸಿ ಇದನ್ನು ಪ್ರಿನ್ಸಿಪಾಲರಿಗೆ ಹಾಕುತ್ತೇನೆಂದು ಭಯಾನಕ ವಾತಾವರಣ ಸೃಷ್ಠಿ ಮಾಡಿರುತ್ತಾರೆಂದು ಮತ್ತು ಕಛೇರಿಯ ಅಧೀಕ್ಷಕರಾದ ಶ್ರೀ ಮೋಹನ್ ನಾಯ್ಕ ಹಾಗೂ ವಿದ್ಯಾರ್ಥಿಗಳಿಗೆ ಅವ್ಯಾಚ ಶಬ್ದಗಳಿಂದ ಬೈಯುವುದು, ಅವರುಗಳಿಗೆ ಅಡ್ಡ ಕಟ್ಟುವುದು ಮತ್ತು ಹರಿತವಾದ ಚಾಕೂ ತೋರಿಸಿ ಬೆದರಿಕೆ ಹಾಕುವುದು, ಅಲ್ಲದೆ ಸಂಸ್ಥೆಯ ಕಿಟಕಿ, ಗಾಜು, ಬೇಸಿನ್, ಸೂಚನಾ ಫಲಕ ಇವುಗಳನ್ನು ಒಡೆದು ಭಯಾನಕ ವಾತಾವರಣವನ್ನು ಸೃಷ್ಠಿಸಿರುತ್ತಾರೆ. ದಿ: 10.09.2012 ರಿಂದ ದಿ: 30.09.2012, ದಿ: 02.10.2012 ರಿಂದ ದಿ: 06.10.2012 ರಿಂದ ಗೈರು ಹಾಜರಾಗಿದ್ದು, ದಿ: 01.10.2012 ರಂದು ಕಛೇರಿಗೆ ಹಾಜರಾಗಿ ಯಾವುದೇ ರಜೆ ಅರ್ಜಿ ಸಲ್ಲಿಸದೆ ನೇರವಾಗಿ ಹಾಜರಿ ವಹಿಯಲ್ಲಿ ಸಹಿ ಮಾಡಿರುತ್ತಾರೆ. ಹಾಗೂ ಪ್ರಥಮ ವರ್ಷದ ವಿದ್ಯಾರ್ಥಿಗಳಾದಿಯಾಗಿ ಕೀ ಲಿಸ್ಟ್, ಅಡ್ಮಿಷನ್ ರೆಜಿಸ್ಟರ್, ಅಡ್ಮಿಷನ್ ಅನುಮೋದನೆಗಾಗಿ ವಿದ್ಯಾರ್ಥಿ ಕ್ರೂಢೀಕೃತ ಪಟ್ಟಿ ತಯಾರಿಸುವ ಸಂದರ್ಭದಲ್ಲಿ ಯಾವುದೇ ಮುನ್ಸೂಚನೆ ನೀಡದೆ ಅನಧಿಕೃತ ಗೈರು ಹಾಜರಾಗಿ ವಿದ್ಯಾರ್ಥಿಗಳಿಗೂ ಸಂಸ್ಥೆಗೂ ತುಂಬಾ ತೊಂದರೆಯನ್ನುಂಟುಮಾಡಿರುತ್ತಾರೆ ಎಂದು ಪ್ರಿನ್ಸಿಪಾಲರು ನಿರ್ದೇಶಕರಿಗೆ ಸಲ್ಲಿಸಿದ ವರದಿಯ ಆಧಾರದ ಮೇರೆಗೆ ಈ ಕಛೇರಿಯ ಆದೇಶ ಸಂ: ಡಿಟಿಇ 5 ಡಿಇಕ್ಯೂ 1 2007, ದಿ: 29.11.2012ರ ಆದೇಶದಲ್ಲಿ ಸದರಿಯವರ ವಿರುದ್ಧ ನೀಡಿದ್ದ ದೂರಿನ ಬಗ್ಗೆ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಕರ್ನಾಟಕ ಸರ್ಕಾರಿ ಸೇವಾ (ವರ್ಗಿಕರಣ, ನಿಯಂತ್ರಣ ಮತ್ತು ಮೇಲ್ಮನವಿ)ನಿಯಮಗಳು 1957ರ ನಿಯಮ 10 (1)ಡಿ ರನ್ವಯ ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿರಿಸಿ ಆದೇಶಿಸಲಾಗಿತ್ತು. ಮುಂದುವರೆದು ಉಲ್ಲೇಖ (6), ದಿ: 23.01.2013ರ ಅವರ ಮೇಲಿನ ಆರೋಪದ ವಿರುದ್ಧ ದೋಷಾರೋಪಣ ಪಟ್ಟಿ ಜಾರಿ ಮಾಡಿ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಲು ತಿಳಿಸಲಾಗಿತ್ತು. ಆದರೆ ಸದರಿ ದೋಷಾರೋಪಣ ಪಟ್ಟಿಗೆ ಅವರು ಯಾವುದೇ ಲಿಖಿತ ಸಮಜಾಯಿಷಿ ಸಲ್ಲಿಸಿರುವುದಿಲ್ಲ.

ಆದ್ದರಿಂದ ಶಿಸ್ತು ಪ್ರಾಧಿಕಾರವು ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಡತೆ (ವರ್ತನೆ) ನಿಯಮಗಳು 1966ರ ನಿಯಮ 3) (i), (ii), (iii) ಮತ್ತು 29 ನ್ನು ಉಲ್ಲಂಘಿಸಿದ ಕಾರಣಕ್ಕಾಗಿ ಉಲ್ಲೇಖ 7) ರಲ್ಲಿ ಓದಲಾದ ನಿರ್ದೇಶಕರ ಆದೇಶದಲ್ಲಿ ಪೂರ್ಣಾವಧಿ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ಶ್ರೀ ಎ.ಕೃಷ್ಣಪ್ಪ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲಾಯಿತು. ಅದರಂತೆ ವಿಚಾರಣಾಧಿಕಾರಿಗಳು ಸದರಿಯವರ ವಿರುದ್ಧ ಮಾಡಲಾದ ಆರೋಪಗಳ ಬಗ್ಗೆ ವಿಚಾರಣೆ ನಡೆಸಿ ಉಲ್ಲೇಖ (8).ರಲ್ಲಿ ಓದಲಾದ ದಿ: 25–05–2013 ರಲ್ಲಿ ಅಂತಿಮ ವಿಚಾರಣಾ ವರದಿ ಸಲ್ಲಿಸಿರುತ್ತಾರೆ. ಸದರಿ ವರದಿಯಲ್ಲಿ ಈ ಕೆಳಕಂಡಂತೆ ವಿಶ್ಲೇಷಿಸಿರುತ್ತಾರೆ. ವರದಿಯಲ್ಲಿ ಕೆಲವು ಉದ್ಧೃತ ಭಾಗ ಕೆಳಗೆ ನೀಡಿದೆ.

ಪ್ರಾಂಶುಪಾಲರು, ಪೋಲೀಸ್ ಸಬ್ಇನ್ಸ್‌ಪೆಕ್ಟರ್ ನಗರ ಪೋಲೀಸ್ ಠಾಣೆ, ಕಾರವಾರ ಇವರಿಗೆ ಆಪಾದಿತರ ವಿರುದ್ಧ ಕ್ರಮ ಜರುಗಿಸಲು ನೀಡಿದ ಫಿರ್ಯಾದು ಮತ್ತು ನಿ.ಪಿ.2 ಇದು ಸದರಿ ಪೋಲೀಸ್ ಠಾಣೆಯವರು ಆಪಾದಿತರ ವಿರುದ್ಧ ಇನ್ನೂ ಕೆಲವು ಕ್ರಿಮಿನಲ್ ಮೊಕದ್ದಮೆಗಳು ಇದ್ದು, ಆತ ಮೇಲಿಂದ ಮೇಲೆ ಅಪರಾದ ಎಸಗಿರುವ ಪ್ರಯುಕ್ತವುಳ್ಳವರಾಗಿರುತ್ತಾರೆ. ಆದ್ದರಿಂದ ಆತನ ಮೇಲೆ ಇಲಾಖಾ ವತಿಯಿಂದ ಸೂಕ್ತ ಕ್ರಮ ಕೈಗೊಳ್ಳುವಂತೆ ಪ್ರಾಂಶುಪಾಲರು ನಿ.ಪಿ.2ರ ಪ್ರಕಾರ ಪತ್ರ ಬರೆದಿದ್ದಾರೆ. ನಂತರ ಪ್ರಾಂಶುಪಾಲರು ನಿ.ಪಿ.4ರ ಪ್ರಕಾರ ಆಪಾದಿತರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಪತ್ರವನ್ನು ಬರೆದಿದ್ದಾರೆ. ಅಲ್ಲದೆ ಆಪಾದಿತರು ಕಛೇರಿಗೆ ಬಂದು ಸಿಬ್ಬಂದಿಯವರು ಹಾಗೂ ಅಶೋಕ್ ಕುಮಾರ್ ರವರಿಗೂ ಭಯ ಉಂಟು ಮಾಡಿರುವ ಬಗ್ಗೆ ಮತ್ತು ಇವರುಗಳನ್ನು ಬೈಯುವುದು ಹಾಗೂ ಭಯದ ವಾತಾವರಣವನ್ನು ಉಂಟು ಮಾಡಿರುವ ಬಗ್ಗೆ ಇವರಿಗೆ ಜ್ಞಾಪನ ಪತ್ರವನ್ನು ನಿ.ಪಿ.6 ಮತ್ತು ನಿ.ಪಿ.7 ಪ್ರಕಾರ ನೀಡಿದ್ದರೂ ಸಹ ಆಪಾದಿತರು ಆ ಪತ್ರಗಳಿಗೆ ಜವಾಬು ನೀಡಿರುವುದಿಲ್ಲ. ಈ ರೀತಿಯಾಗಿ ಎಲ್ಲಾ ಸಾಕ್ಷಿದಾರರ ಹೇಳಿಕೆಗಳನ್ನು ಹಾಗೂ ನಿ.ಪಿ.2 ರಿಂದ ನಿ.ಪಿ.7 ದಾಖಲಾತಿಗಳನ್ನು ಪರಿಶೀಲಿಸಲಾಗಿ ನನ್ನ ಅಭಿಪ್ರಾಯದಲ್ಲಿ ಆಪಾದಿತನು ದಿ: 07.11.2012 ರಂದು ಸಾಯಂಕಾಲ 4.00 ಗಂಟೆ ಸಮಯದಲ್ಲಿ ಕಾಲೇಜಿನ ಕಛೇರಿಗೆ ಕುಡಿದು ಬಂದು ಕಾಲಿನ ಶೂ ಹಾಗೂ ಕಾಲು ಚೀಲದಲ್ಲಿ ಒಂದು ಚಾಕುವನ್ನು ತಂದು ಪ್ರಾಂಶುಪಾಲರಿಗೆ ಹಾಕುತ್ತೇನೆಂದು ಹೇಳುತ್ತಾ ಎಲ್ಲಾ ಸಿಬ್ಬಂದಿ ವರ್ಗದವರಿಗೂ ಮತ್ತು ಕಛೇರಿ ಅಧೀಕ್ಷಕರಿಗೂ ಮತ್ತು ಪ್ರಾಂಶುಪಾಲರೆಲ್ಲರಿಗೂ ಸಹ ಭಯ ಉಂಟು ಮಾಡಿರುವುದು ಮತ್ತು ಅವರನ್ನು ಬೈಯುವುದು ಮತ್ತು ಕೆಲಸ ಕಾರ್ಯಗಳಿಗೆ ಅಡಚಣೆ ಉಂಟು ಮಾಡುವುದು, ಎಲ್ಲವೂ ಸಹ ಸಾಕ್ಷಿದಾರರ ಹೇಳಿಕೆಗಳಿಂದ ಮತ್ತು ದಾಖಲಾತಿಗಳಿಂದ **"ರುಜುವಾತಾಗಿದೆ"**

ಆಪಾದಿತರು ಸರ್ಕಾರಿ ನೌಕರರಾಗಿದ್ದು, ಈ ರೀರಿ ಕಛೇರಿಗೆ ಬಂದು ಅಸಭ್ಯವಾಗಿ ನಡೆದುಕೊಂಡಿದ್ದು, ಅಲ್ಲದೆ, ಪ್ರಾಂಶುಪಾಲರಿಗೂ, ಕಛೇರಿ ಅಧೀಕ್ಷಕರಿಗೂ ಎಲ್ಲಾ ಸಿಬ್ಬಂದಿ ವರ್ಗದವರಿಗೂ ಚಾಕುವಿನಿಂದ ಭಯ ಹುಟ್ಟಿಸಿ, ಭಯದ ವಾತಾವರಣ ಉಂಟು ಮಾಡಿರುವುದು ನನ್ನ ಅಭಿಪ್ರಾಯದಲ್ಲಿ ಆಪಾದಿತರು ಒಬ್ಬ ಸರ್ಕಾರಿ ನೌಕರನಲ್ಲದ ರೀತಿಯಲ್ಲಿ ನಡೆದಿರುವುದು ಕಂಡು ಬರುತ್ತದೆ. ಮತ್ತು ಪೋಲೀಸ್ ನವರು ಪ್ರಾಂಶುಪಾಲರಿಗೆ ಬರೆದ ಪತ್ರ ನಿ.ಪಿ.2ರ ಪ್ರಕಾರ ಆಪಾದಿತರು ಕ್ರಿಮಿನಲ್ ಪ್ರಕರಣಗಳಲ್ಲಿ ಭಾಗಿಯಾಗಿರುವುದು ಕಂಡು ಬರುತ್ತದೆ. ಅಲ್ಲದೆ ಸದರಿ ಪೋಲೀಸ್‌ನವರ ಪತ್ರದ ಪ್ರಕಾರ ಪದೇ ಪದೇ ಅಪರಾದವೆಸಗುವ ಪ್ರವೃತ್ತಿವುಳ್ಳವರಾಗಿರುತ್ತಾರೆ ಎಂಬುದು ನನ್ನ ಅಭಿಪ್ರಾಯವಾಗಿರುತ್ತದೆ.

ಒಬ್ಬ ನೌಕರನು ಕಛೇರಿಯಲ್ಲಿ (ಒಳಗೆ ಮತ್ತು ಹೊರಗಿನ ಸ್ಥಳಗಳಲ್ಲಾಗಲಿ) ಅಶಿಸ್ತಿನಿಂದ ಅಸಭ್ಯವಾಗಿ ವರ್ತಿಸುವ ಬಗ್ಗೆ ಸುಪ್ರಿಂ ಕೋರ್ಟ್‌ನವರು ಅಫೀಲ್ (ಸಿವಿಲ್) ಸಂಖ್ಯೆ: 1508:2003. (ಮಹೇಂದ್ರ ಅಂಡ್ ಮಹೇಂದ್ರ ಲಿಮಿಟೆಡ್ ವಿರುದ್ಧ ಎನ್.ಬಿ.ನರವದೇ ಈ ಪ್ರಕರಣದಲ್ಲಿ ಸುಪ್ರಿಂ ಕೋರ್ಟ್‌ನವರು:

"For the reasons stated above, this appeal succeeds. The order of the Division Branch, Single Judge of the High Court and that of the Labour Court to the extent that it sets aside the order of dismissal and directs the reinstatement, is quashed, we uphold the order of the disciplinary authority dismissing respondent workman from service the Appeal is allowed, holding that the punishment of dismissal is not disproporated to the misconduct."

ಈ ಮೇಲಿನ ಸುಪ್ರಿಂ ಕೋರ್ಟ್ ತೀರ್ಪು ನನ್ನ ಅಭಿಪ್ರಾಯದಲ್ಲಿ ಈ ಪ್ರಕರಣದ ಸಂದರ್ಭ ಸನ್ನಿವೇಶಗಳಿಗೆ ಹೊಂದಿಕೊಳ್ಳುತ್ತದೆ ಎಂಬುದಾಗಿದೆ. ಸದರಿ ತೀರ್ಪಿನಲ್ಲಿ ಕ್ಛಛೇರಿಯ ನೌಕರನು ಮೇಲಾಧಿಕಾರಿಗಳಿಗೆ ಅವ್ಯಾಚ ಶಬ್ದಗಳಿಂದ ಬೈಯುವುದು, ಕುಡಿತದ ಅಮಲಿನಲ್ಲಿ ಕಛೇರಿಗೆ ಹಾಜರಾಗುವುದು, ಮತ್ತು ಚಾಕುವಿನಿಂದ ಸಿಬ್ಬಂದಿ ವರ್ಗದವರಿಗೆ ಬೆದರಿಸುವುದು, ಕಛೇರಿಯ ಕಿಟಕಿಗಳಿಗೆ ಹಾನಿಯನ್ನುಂಟು ಮಾಡುವುದು, ಮತ್ತು ಗಲಾಟೆ ಮಾಡುವುದು ಇವೆಲ್ಲವೂ ಸಹ disorderly behaviour ಆಗಿರುತ್ತದೆಂದು ನೀಡಿರುವ ತೀರ್ಪು ಈ ಪ್ರಕರಣಕ್ಕೆ ಸರಿಯಾಗಿ ಹೊಂದಿಕೊಳ್ಳುತ್ತದೆ ಎಂಬುದು ನನ್ನ ಅಭಿಪ್ರಾಯವಾಗಿದೆ.

ಅಲ್ಲದೆ ಈ ವರದಿಯಲ್ಲಿ, ಸದರಿ ಕಾಲೇಜಿನ ಪ್ರಾಂಶುಪಾಲರು, ಕಛೇರಿ ಅಧೀಕ್ಷಕರು ಮತ್ತು ಎಲ್ಲಾ ಸಿಬ್ಬಂದಿ ವರ್ಗದವರ ಹೇಳಿಕೆಗಳನ್ನು ನಂಬದೇ ಇರಲು ಸಾಧ್ಯವಿಲ್ಲ. ಆದ್ದರಿಂದ ನನ್ನ ಅಭಿಪ್ರಾಯದಲ್ಲಿ ಸಾಕ್ಷಿದಾರರು ಆಪಾದಿತರ ವಿರುದ್ಧ ನೀಡಿರುವ ಹೇಳಿಕಗಳನ್ನು ಒಪ್ಪಿಕೊಳ್ಳುವಂತಾಗುತ್ತದೆ. ಆದರೆ, ಆಪಾದಿತರು ಸಾಕ್ಷಿಗಳ ಹೇಳಿಕೆಯನ್ನು ಅಲ್ಲಗಳೆಯುತ್ತಾ ತನ್ನ ಲಿಖಿತ ರಕ್ಷಣಾ ಹೇಳಿಕೆಯಲ್ಲಿ ನನ್ನ ವಿರುದ್ಧ ಸಾಕ್ಷಿದಾರರು ಸುಳ್ಳು ಸಾಕ್ಷಿ ನೀಡಿರುತ್ತಾರೆ. ಈ ಪ್ರಕರಣದಲ್ಲಿ ಸಿಬ್ಬಂದಿ ವರ್ಗದವರನ್ನು ಹೊರತುಪಡಿಸಿ ಖಾಸಗಿ ವ್ಯಕ್ತಿಗಳನ್ನು ಸಾಕ್ಷಿಯನ್ನಾಗಿ ಪ್ರಕರಣದಲ್ಲಿ ವಿಚಾರಣೆ ಮಾಡಿರುವುದಿಲ್ಲ. ಆದ್ದರಿಂದ ದೋಷಾರೋಪಣ ಪಟ್ಟಿಯು 'ಅಸಿಂಧು' ಅಗಿರುತ್ತದೆ ಎಂಬ ನಿಲುವನ್ನು ತಳೆದಿರುತ್ತಾರೆ.

ಸದರಿ ರಕ್ಷಣಾ ಹೇಳಿಕೆಯನ್ನು ನನ್ನ ಅಭಿಪ್ರಾಯದಲ್ಲಿ ಒಪ್ಪಲು ಸಾಧ್ಯವಿಲ್ಲ. ಕಾರಣ ಈ ಪ್ರಕರಣದ ಘಟನೆಯು ಕಛೇರಿಯ ಒಳಭಾಗದಲ್ಲಿ ನಡೆದಿರುವುದರಿಂದ ಬೇರೆ ಯಾವ ಸಾರ್ವಜನಿಕರೂ ಸಹ ಘಟನೆಯನ್ನು ನೋಡದೇ ಇರುವುದರಿಂದ ಖಾಸಗಿ ವ್ಯಕ್ತಿಗಳನ್ನು ಸಾಕ್ಷಿಯನ್ನಾಗಿ ಕರೆಯುವ ಪ್ರಮಯವಿರುವುದಿಲ್ಲ (ಬರುವುದಿಲ್ಲ). ಆದ್ದರಿಂದ ಆಪಾದಿತರ ರಕ್ಷಣಾ ಹೇಳಿಕೆಯಲ್ಲಿ ಯಾವು ತಿರುಳೂ ಇರುವುದಿಲ್ಲ ಎಂಬುದು ನನ್ನ ಅಭಿಪ್ರಾಯವಾಗಿದೆ. ಅದನ್ನು ಈ ಮೂಲಕ ತಳ್ಳಿ ಹಾಕಲಾಗಿದೆ. ಈ ರೀತಿಯಾಗಿ ಉಭಯ ಪಾರ್ಟಿಗಳ ಸಾಕ್ಷಾಧಾರಗಳನ್ನು ಹಾಗೂ ದಾಖಲಾತಿಗಳನ್ನು ಪರಿಶೀಲಿಸಲಾಗಿ ನನ್ನ ಅಭಿಪ್ರಾಯದಲ್ಲಿ ಆಪಾದಿತರ ವಿರುದ್ಧ ಹೊರಿಸಲಾದ 1ನೇ ಆರೋಪವು ರುಜುವಾತಾಗಿರುತ್ತದೆಂದು ದಾಖಲಿಸಿರುತ್ತಾರೆ.

ಸಾಕ್ಷಿ ಹೇಳಿಕೆಯಲ್ಲಿ ಆಪಾದಿತರು ದಿ: 10.09.2012 ರಿಂದ ದಿ: 30.09.2012, ದಿ: 02.10.2012 ರಿಂದ ದಿ: 06.12.2012ರ ವರೆಗೆ ಯಾವ ಮುನ್ಸೂಚನೆ ನೀಡದೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಅಲ್ಲದೆ ಅವರು ದಿ: 01.10.2012 ರಂದು ಕಛೇರಿಗೆ ಹಾಜರಾಗದೇ ಯಾವುದೇ ರಜೆ ಅರ್ಜಿ ಸಲ್ಲಿಸದೆ ನೇರವಾಗಿ ಹಾಜರಾತಿ ವಹಿಯಲ್ಲಿ ಸಹಿ ಮಾಡಿರುತ್ತಾರೆ. ಆಪಾದಿತರು ವಿದ್ಯಾರ್ಥಿಗಳ ಪರೀಕ್ಷೆಗೆ ಸಂಬಂಧಿಸಿದ ಎಲ್ಲಾ ಕಾರ್ಯಗಳನ್ನು ನಿರ್ವಹಿಸುವ ಜವಾಬ್ದಾರಿಯವರಾಗಿರುತ್ತಾರೆ. ಅಲ್ಲದೆ ಅವರು ಸುಪರ್ಧಿಯಲ್ಲಿ ಕೀ–ಲಿಸ್ಟ್, ಅಡ್ಮಿಷನ್ ರಿಜಿಸ್ಟರ್, ಅಡ್ಮಿಷನ್ ಅನುಮೋದನೆಗಾಗಿ ವಿದ್ಯಾರ್ಥಿಗಳ ಕ್ರೂಢೀಕೃತ ಪಟ್ಟಿ ತಯಾರಿಸುವುದು, ಸಹ ಅವರ ಜವಾಬ್ದಾರಿಯಾಗಿರುತ್ತದೆ. ಆದರೆ ಅವರು ಎಲ್ಲಾ ಕೆಲಸಗಳನ್ನು ನಿರ್ವಹಿಸದೆ ಗೈರು ಹಾಜರಾಗಿದ್ದು, ವಿದ್ಯಾರ್ಥಿಗಳ ಕ್ರೂಢೀಕೃತ ಪಟ್ಟಿ ತಯಾರಿಸುವುದು ಸಹ ಅವರ ಜವಾಬ್ದಾರಿಯಾಗಿರುತ್ತದೆ. ಆದರೆ ಅವರು ಎಲ್ಲಾ ಕಾರ್ಯಗಳನ್ನು ನಿರ್ವಹಿಸದೆ ಗೈರು ಹಾಜರಾಗಿದ್ದು, ವಿದ್ಯಾರ್ಥಿಗಳ ಪರೀಕ್ಷೆ ಕಾಲಕ್ಕೆ ವಿದ್ಯಾರ್ಥಿಗಳಿಗೂ ಮತ್ತು ಸಂಸ್ಥೆಗೂ ತೊಂದರೆ ಉಂಟು ಮಾಡಿರುತ್ತಾರೆ. ಈ ರೀತಿ ಆಪಾದಿತರು ಸರ್ಕಾರಿ ನೌಕರನಲ್ಲದ ರೀತಿಯಲ್ಲಿ ವರ್ತಿಸಿ ಕರ್ತವ್ಯ ಲೋಪ ಮತ್ತು ನಿರ್ಲಕ್ಷತೆಯಿಂದ ನಡೆದುಕೊಂಡಿರುತ್ತಾರೆಂದು ಸಾಕ್ಷಿ ನುಡಿಯುತ್ತಾರೆ. ಅದೇ ರೀತಿ ಎರಡನೇ ಸಾಕ್ಷಿಯಾದ ಶ್ರೀ ಅಶೋಕ್ ನಾಯ್ಕ, ಕುಲ ಸಚಿವರು, ಶ್ರೀ ಮೋಹನ ನಾಯ್ಕ, ಕಛೇರಿ ಅಧೀಕ್ಷಕರು, ಪಿ.ಡಬ್ಲ್ಯೂ–3 ಇವರುಗಳು ಸಹ ಆಪಾದಿತರು ತನ್ನ ಕರ್ತವ್ಯಕ್ಕೆ ಗೈರು ಹಾಜರಿಯಾಗಿರುವ ಬಗ್ಗೆ ಮೊದಲನೇ ಸಾಕ್ಷಿಯವರ ಹೇಳಿಕೆಯನ್ನು ಬೆಂಬಲಿಸಿ ಪುಷ್ಠೀಕರಿಸಿರುತ್ತಾರೆ. ಆಪಾದಿತರ ಗೈರು ಹಾಜರಿ ಬಗ್ಗೆ ಅವರಿಗೆ ಪ್ರಾಂಶುಪಾಲರು ನಿ.ಪಿ.5 ಮತ್ತು ನಿ.ಪಿ.6ರ ಪ್ರಕಾರ ಅವರಿಗೆ ಜ್ಞಾಪನ ಪತ್ರವನ್ನು ಜಾರಿ ಮಾಡಲಾಗಿತ್ತು, ಆ ನೋಟೀಸುಗಳಿಗೆ ಯಾವ ಜವಾಬುಗಳನ್ನೂ ಸಹ ನೀಡಿರುವುದಿಲ್ಲ ಅಲ್ಲದೆ ಆಪಾದಿತರ ಗೈರು ಹಾಜರಿ ಬಗ್ಗೆ ಇಲಾಖೆಯವರು ನಿ.ಪಿ.8 ಕಛೇರಿ ಹಾಜರಾತಿ ಪುಸ್ತಕವನ್ನು ಹಾಜರಿ ಪಡಿಸಿರುತ್ತಾರೆ. ಸದರಿ ಹಾಜರಾತಿ ಪುಸ್ತಕದ ನಕಲನ್ನು ಪರಿಶೀಲಿಸಲಾಗಿ ಆಪಾದಿತರು ಪ್ರಾಂಶುಪಾಲರ ಅನುಮತಿ ಪಡೆಯದೆ ಹಾಜರಾತಿ ಪುಸ್ತಕಕ್ಕೆ ಸಹಿ ಮಾಡಿರುವುದು ಮತ್ತು ಆಪಾದಿತರು ಪ್ರಾಂಶುಪಾಲರ ಹೇಳಿಕೆ ಪ್ರಕಾರ ಅವರು ದಿ: 10.09.2012 ರಿಂದ ದಿ: 30.09.2012, ದಿ: 02.10.2012 ರಿಂದ ದಿ: 06.12.2012ರ ವರೆಗೆ ಗೈರು ಹಾಜರಾಗಿರುವುದು ರುಜುವಾತಾಗಿರುತ್ತದೆಯೆಂದು ವಿಚಾರಣಾಧಿಕಾರಿಗಳು ವರದಿಯಲ್ಲಿ ತಿಳಿಸಿರುತ್ತಾರೆ.

ಆದರೆ ಆಪಾದಿತರು ತನ್ನ ಗೈರು ಹಾಜರಾತಿ ಬಗ್ಗೆ ತನ್ನ ಲಿಖಿತ ರಕ್ಷಣ ಹೇಳಿಕೆಯಲ್ಲಿ ಈ ಕೆಳಕಂಡಂತೆ ಹೇಳಿರುತ್ತಾರೆ. ದಿ: 10.09.2012 ರಂದು ರಜೆ ಮೇಲೆ ಹೋಗುವ ಪೂರ್ವದಲ್ಲಿ ನನ್ನ ಆರೋಗ್ಯ ಹದಗೆಟ್ಟಿರುವುದರಿಂದ ಸ್ವತಃ ಪ್ರಿನ್ಸಿಪಾಲರು ಹಾಗೂ ಎಲ್ಲಾ ಸಿಬ್ಬಂದಿ ವರ್ಗದವರೂ ನನ್ನನ್ನು ಸರ್ಕಾರಿ ಆಸ್ಪತ್ರೆಗೆ ದಾಖಲು ಮಾಡಿರುತ್ತಾರೆ. ತದನಂತರ ನನ್ನ ತಾಯಿ ಹಾಗೂ ನನ್ನ ಅಕ್ಕಂದಿರು ಅದನ್ನು ಮನಗಂಡು ಪ್ರಾಂಶುಪಾಲರಿಗೆ ಸಮಕ್ಷಮವಾಗಿ ಭೇಟಿಯಾಗಿ ನನ್ನ ವೈದ್ಯಕೀಯ ಚಿಕಿತ್ಸೆಯು ಅವಶ್ಯಕವೆಂದು ಅವರಿಗೆ ಮನವರಿಕೆ ಮಾಡಿಕೊಟ್ಟು ನನಗೆ ರಜೆ ನೀಡಬೇಕಾಗಿ ವಿನಂತಿಸಿರುತ್ತಾರೆ. ಆದರೆ ಪ್ರಿನ್ಸಿಪಾಲರು ನನ್ನ ವಿರುದ್ಧ ಇಲ್ಲದ ಸಲ್ಲದ ಸುಳ್ಳು ಆರೋಪಗಳನ್ನು ಮಾಡುತ್ತಾರೆ ಎಂದು ನುಡುಯುತ್ತಾ ನನ್ನನ್ನು ದೋಷಮುಕ್ತ ಮಾಡಬೇಕೆಂದು ವಿನಂತಿಸಿರುತ್ತಾರೆ.

ಆದರೆ ಆಪಾದಿತರು ತನಗೆ ಅನಾರೋಗ್ಯ ನಿಮಿತ್ತ ತಾನು ಗೈರು ಹಾಜರಾಗಿದ್ದಾರೆ ಎಂಬುದಕ್ಕೆ ಅವರು ಯಾವ ವೈದ್ಯಕೀಯ ಪ್ರಮಾಣ ಪತ್ರವನ್ನು ಹಾಜರು ಪಡಿಸಿರುವುದಿಲ್ಲ. ಅಲ್ಲದೆ ಅವರು ರಜೆ ಮಂಜೂರು ಮಾಡಲು ಯಾವ ಅರ್ಜಿಯನ್ನೂ ಸಲ್ಲಿಸಿರುವುದಿಲ್ಲ. ಆದ್ದರಿಂದ ಅವರ ಸದರಿ ರಕ್ಷಣಾ ಹೇಳಿಕೆಯನ್ನು ಒಪ್ಪಲು ಸಾಧ್ಯವಿಲ್ಲ. ಅದನ್ನು ಈ ಮೂಲಕ ತಳ್ಳಿ ಹಾಕಲಾಗಿದೆ.

ಕೊನೆಯದಾಗಿ ಮೇಲೆ ಹೇಳಿದ ಎಲ್ಲಾ ಕಾರಣಗಳಿಂದಾಗಿ ಹಾಗೂ ಉಭಯ ಪಾರ್ಟಿಗಳ ಸಾಕ್ಷಾಧಾರಗಳನ್ನು ಹಾಗೂ ದಾಖಲಾತಿಗಳನ್ನು ಪರಿಶೀಲಿಸಿ ನನ್ನ ಅಭಿಪ್ರಾಯದಲ್ಲಿ ಆಪಾದಿತರ ವಿರುದ್ಧ ಮಾಡಿರುವ 1 ಮತ್ತು 2 ಆರೋಪಗಳು **"ರುಜುವಾತಾಗಿದೆ"** ಎಂದು ತೀರ್ಮಾನಿಸಿ ಈ ಅಂತಿಮ ವರದಿ ಸಲ್ಲಿಸಲಾಗಿದೆ ಎಂದು ಶಿಸ್ತು ಪ್ರಾಧಿಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

ಸದರಿ ವಿಚಾರಣಾ ವರದಿಯನ್ನು ಲಗತ್ತಿಸಿ ದಿ: 10.06.2013 ರಂದು ಎರಡನೇ ಕಾರಣ ಕೇಳುವ ನೋಟೀಸ್ ಮೂಲಕ ಶ್ರೀ ರವಿ ನಾಯ್ಕ ಅವರಿಗೆ ಜಾರಿ ಮಾಡಿ 30 ದಿನಗಳೊಳಗಾಗಿ ಅವರ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಲು ತಿಳಿಸಲಾಯಿತು. ಅದರಂತೆ ಸದರಿಯವರು ದಿ: 23.07.2013 ರಂದು ಪ್ರಿನ್ಸಿಪಾಲರ ಮುಖೇನ ಸಮಜಾಯಿಷಿಯನ್ನು ಸಲ್ಲಿಸಿರುತ್ತಾರೆ. ಸದರಿ ಸಮಜಾಯಿಷಿಯನ್ನು ಪರಿಶೀಲಿಸಲಾಗಿ ವಿಚಾರಣಾಧಿಕಾರಿಗಳು ನನ್ನ ಮೇಲೆ ಫಿರ್ಯಾದಿ ಹೊರಿಸಿರುವ ಆರೋಪಗಳನ್ನು ರುಜುವಾತು ಪಡಿಸಲು ಪ್ರಾಂಶುಪಾಲರನ್ನು, ಕುಲಸಚಿವರನ್ನು, ಅಧೀಕ್ಷಕರನ್ನು, ಸಹಾಯಕರನ್ನು, ಹಿರಿಯ ಬೆರಳಚ್ಚುಗಾರರನ್ನು, ಡಿ ದರ್ಜೆ ನೌಕರರನ್ನು ಅರೆಕಾಲಿಕ ಅಕುಶಲದಾಳುಗಳನ್ನು ಸಾಕ್ಷಿದಾರರನ್ನಾಗಿ ವಿಚಾರಣೆ ಮಾಡಿರುತ್ತದೆ. ಆದರೆ ಇದನ್ನು ಹೊರತುಪಡಿಸಿ ಪ್ರತ್ಯಕ್ಷ ಸಾಕ್ಷಿ ಯಾವುದೂ ಇರುವುದಿಲ್ಲ. ಮತ್ತು ಪ್ರಕರಣದಲ್ಲಿ ತಿಳಿಸಿದಂತೆ ನಾನು ಯಾವುದೇ ರೀತಿಯ ಅಪರಾಧವನ್ನು ಅಶಿಸ್ತಿನಿಂದ ಅಸಭ್ಯವಾಗಿ ವರ್ತಿಸಿರುವುದಿಲ್ಲ. ಈ ಪ್ರಕರಣದಲ್ಲಿ ಖಾಸಗಿ ವ್ಯಕ್ತಿಗಳನ್ನು ಸಾಕ್ಷಿಯನ್ನಾಗಿ ವಿಚಾರಣೆ ಮಾಡಿರುವುದಿಲ್ಲ. ಆದುದರಿಂದ ದೋಷಾರೋಪಣ ಪಟ್ಟಿಯ ಆರೋಪಗಳು ಅಸಿಂಧು ಆಗಿರುತ್ತದೆ ಎಂದು ಶ್ರೀ ರವಿ ನಾಯ್ಕ ರವರು ತಿಳಿಸಿರುತ್ತಾರೆ.

ಸದರಿಯವರು ಎರಡನೇ ಕಾರಣ ಕೇಳುವ ನೋಟೀಸಿಗೆ ನೀಡಿರುವ ರಕ್ಷಣಾ ಹೇಳಿಕೆಯನ್ನು ವಿಚಾರಣಾಧಿಕಾರಿಗಳ ಮುಂದೆಯೂ ಸಹ ಪ್ರತಿಪಾದಿಸಿದ್ದರು. ಇದಕ್ಕೆ ವಿಚಾರಣಾಧಿಕಾರಿಗಳು ವರದಿಯ ಪುಟ ಸಂಖ್ಯೆ: 12ರ ಕಂಡಿಕೆ ಎರಡರಲ್ಲಿ ಕಡಳಕಂಡಂತೆ ಉಲ್ಲೇಖಿಸಿರುತ್ತಾರೆ. ಸದರಿ ರಕ್ಷಣಾ ಹೇಳಿಕೆಯನ್ನು ನನ್ನ ಅಭಿಪ್ರಾಯದಲ್ಲಿ ಒಪ್ಪಲು ಸಾಧ್ಯವಿಲ್ಲ. ಕಾರಣ ಈ ಪ್ರಕರಣ ಘಟನೆಯು ಕಛೇರಿಯ ಒಳಭಾಗದಲ್ಲಿ ನಡೆದಿರುವುದರಿಂದ ಬೇರೆ ಯಾವ ಸಾರ್ವಜನಿಕರು ಸಹ ಘಟನೆಯನ್ನು ನೋಡದೇ ಇರುವುದರಿಂದ ಖಾಸಗಿ ವ್ಯಕ್ತಿಗಳನ್ನು ಸಾಕ್ಷಿಯನ್ನಾಗಿ ಕರೆಯುವ ಪ್ರಮೇಯವಿರುವುದಿಲ್ಲ. ಆದುದರಿಂದ ಆಪಾದಿತರ ರಕ್ಷಣಾ ಹೇಳಿಕೆಯಲ್ಲಿ ಯಾವ ತಿರುಳು ಇರುವುದಿಲ್ಲವೆಂದು ಅಭಿಪ್ರಾಯ ಪಟ್ಟು ತಳ್ಳಿಹಾಕಿರುತ್ತಾರೆ. ಆದ್ದರಿಂದ ಎರಡನೇ ನೋಟೀಸಿಗೆ ಆಪಾದಿತರು ನೋಡಿರುವ ಹೇಳಿಕೆಯನ್ನು ಶಿಸ್ತು ಪ್ರಾಧಿಕಾರವು ಒಪ್ಪದೇ ವಿಚಾರಣಾಧಿಕಾರಿಗಳ ಅಂತಿಮ ವರದಿಯನ್ನು ಅಂಗೀಕರಿಸಿದೆ.

ಈ ಹಿಂದೆಯೂ, ಶ್ರೀ ರವಿ ನಾಯ್ಕ, ದ್ವಿತೀಯ ದರ್ಜೆ ಸಹಾಯಕರು ಇವರು ಈ ಹಿಂದೆಯೂ ಸಹ ಅನಧಿಕೃತ ಗೈರು ಹಾಜರಿ, ಹಾಗೂ ಪ್ರಿನ್ಸಿಪಾಲರ ಮೇಲೆ ಉದ್ಧಟತನದಿಂದ ವರ್ತಿಸಿರುವ ಸಂಬಂಧ ಶ್ರೀ ಆನಂದ ಪೂಜಾರಿ, ಜಂಟಿ ನಿರ್ದೇಶಕರು (ಪರೀಕ್ಷೆ) ಇವರು ಇಲಾಖಾ ವಿಚಾರಣೆ ನಡೆಸಿ. ಸದರಿ ನೌಕರರ ವಿರುದ್ಧ ದಾಖಲಿಸಲಾಗಿದ್ದ ದೂರಿನ ಬಗ್ಗೆ ಪರಿಶೀಲಿಸಿ ದಿ: 14.12.2009 ರಂದು ವರದಿ ಸಲ್ಲಿಸಿದ್ದರು.

ಈ ವರದಿಯಲ್ಲಿ ಸದರಿಯವರು ಅನಧಿಕೃತ ಗೈರು ಹಾಜರಾಗಿ ವಿದ್ಯಾರ್ಥಿಗಳಿಗೆ ತೊಂದರೆಯಾಗಿರುವುದು ಹಾಜರಾತಿ ಪುಸ್ತಕದಲ್ಲಿ ಸಹಿ ಹಾಕಿ ಕೆಲಸಕ್ಕೆ ಹಾಜರಾಗದೆ ಇರುವ ಬಗ್ಗೆ ಪ್ರಿನ್ಸಿಪಾಲರ ಮೇಲೆ ಉದ್ಧಟತನದಿಂದ ವರ್ತಿಸಿ ಮದ್ಯಪಾನ ಮಾಡಿ ಅವ್ಯಾಚ ಶಬ್ದಗಳಿಂದ ನಿಂದಿಸಿ ಸಹೋದ್ಯೋಗಿಗಳೊಡನೆ ಗಲಾಟೆ ಮಾಡಿ ನಂತರ ಪೋಲೀಸ್ ಠಾಣೆಯಲ್ಲಿ ಪ್ರಕರಣ ದಾಖಲಾಗಿರುತ್ತದೆ.

ಮಾನ್ಯ ನ್ಯಾಯಾಧೀಶರು ಜೆ.ಎಂ.ಎಫ್.ಸಿ ನ್ಯಾಯಾಲಯ, ಕಾರವಾರ ಇವರ ಮುಂದೆ ಪೋಲೀಸ್ ನಿರೀಕ್ಷಕರು, ಕರಾವಳಿ ಕಾವಲು ಪೋಲೀಸ್ ಠಾಣೆ ಇವರು ಶ್ರೀಯುತರ ಮೇಲಿರುವ ಪ್ರಥಮ ವರ್ತಮಾನ ವರದಿ ಕ್ರ.ಸಂ: 0276738, ದಿ: 13.03.2008 ರನ್ವಯ ನ್ಯಾಯಾಂಗ ಬಂಧನಕ್ಕೆ ಒಳಗಾದ ಬಗ್ಗೆ ಕೋರ್ಟಿನಲ್ಲಿ ಎಫ್.ಐ.ಆರ್ ಸಂ: 3/08, ದಿ: 13.03.2008ರಂದು ಹಾಗೂ ಪಾಸ್ಟ್ ಟ್ರಾಕ್ ಕೋರ್ಟ್, ಕಾರವಾರ ಇಲ್ಲಿ ಕ್ರಿಮಿನಲ್ ದಾವೆ ಸಂ: 184/2008 ದಾಖಲಾಗಿರುವುದು ವಿಚಾರಣೆ ಸಂದರ್ಭದಲ್ಲಿ ಬೆಳಕಿಗೆ ಬಂದಿರುತ್ತದೆ. ಶ್ರೀ ಆನಂದ ಪೂಜಾರಿ ಇವರ ವಿಚಾರಣಾ ವರದಿಯಲ್ಲಿ ಕೆಳಕಂಡಂತೆ ದಿ: 14.12.2009ರಂದು ವರದಿ ಸಲ್ಲಿಸಿದ್ದರು.

ಈ ವರದಿಯಲ್ಲಿ ಶ್ರೀ ರವಿ ನಾಯ್ಕ ಇವರ ವಿರುದ್ಧ ಮಾಡಿರುವ ಹೆಚ್ಚಿನ ಆರೋಪಗಳು ಸಾಬೀತಾಗಿರುವುದರಿಂದ ಮಾಡಿರುವ ಅಪರಾಧಗಳಿಗೆ ಗುರುತರವಾದ ಶಿಕ್ಷೆಗೆ ಅರ್ಹರಾಗಿದ್ದರೂ ಇನ್ನು ಮುಂದೆಯಾದರೂ ಸಭ್ಯತೆಯಿಂದ ಒಳ್ಳೆಯ ನಡತೆಯಿಂದ ಸಮಾಜದಲ್ಲಿ ಜೀವನ ಸಾಗಿಸಲಿ ಎಂಬ ಸದುದ್ದೇಶದಿಂದ ಒಂದು ಸಾರಿ ಸುಧಾರಣೆ ಮಾಡಲು ಅವಕಾಶ ನೀಡಿ ಶ್ರೀಯುತರ ಕೌಟುಂಬಿಕ ಹಿನ್ನಲೆ ಹಾಗೂ ಅವರನ್ನು ಅವಲಂಬಿಸಿರುವವರ ಭವಿಷ್ಯದ ಹಿತದೃಷ್ಟಿಯಿಂದ ಗುರುತರವಾದ ಶಿಕ್ಷೆಯನ್ನು ನೀಡುವ ಬದಲು ಇವರ 2 ವಾರ್ಷಿಕ ವೇತನ ಬಡ್ತಿಯನ್ನು ತಡೆ ಹಿಡಿಯಲು ಸೂಕ್ತ ಕ್ರಮ ಕೈಗೊಳ್ಳಬಹುದು ಎಂದು ವರದಿಯಲ್ಲಿ ತಿಳಿಸಲಾಗಿತ್ತು. ಇವುಗಳೆಲ್ಲವನ್ನೂ ಪರಿಶೀಲಿಸಿ ಶಿಸ್ತು ಪ್ರಾಧಿಕಾರವಾದ ನಿರ್ದೇಶನಾಲಯದ ಆಡಳಿತಾಧಿಕಾರಿಗಳು ಸದರಿಯವರ ದುರ್ನಡತೆ, ಕರ್ತವ್ಯ ಲೋಪ, ವಿದ್ಯಾರ್ಥಿಗಳಿಗೆ ಅನಾವಶ್ಯಕ ತೊಂದರೆ ಮಾಡಿರುವುದಿರಂದ ದಂಡನೆಯಾಗಿ ಕರ್ನಾಟಕ ಸರ್ಕಾರಿ ಸೇವಾ (ಸಿಸಿಎ) ನಿಯಮಾವಳಿ 1957ರ ನಿಯಮ 8 ಉಪನಿಯಮ (iii) ರನ್ವಯ ಎರಡು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಸಹಿತ (With Cumulative Effect) 2010ರ ವಾರ್ಷಿಕ ಬಡ್ತಿಯಿಂದ ಜಾರಿಗೆ ಬರುವಂತೆ ತಡೆಹಿಡಿಯಲಾಗಿತ್ತು.

ಸದರಿ ನೌಕರರ ವರ್ತನೆಯಲ್ಲಿ ಯಾವುದೇ ಬದಲಾವಣೆ ಆಗದೇ ಇದ್ದುದರಿಂದ ಮತ್ತು ಇವರ ದುರ್ವರ್ತನೆ ದಿನೇದಿನೇ ಮಿತಿಮೀರಿ ಬೆಳೆದು ಸಂಸ್ಥೆಯ ವಾತಾವರಣವನ್ನು ಅಶಾಂತಿ ಗೂಂಡಾ ಪ್ರವೃತ್ತಿಯಿಂದ ಕಲುಷಿತ ಗೊಳಿಸಿರುತ್ತಾರೆ. ಅಲ್ಲದೆ ಅನಧಿಕೃತ ಗೈರು ಹಾಜರಾಗಿ, ಸಂಸ್ಥೆಯ ಆಸ್ತಿಪಾಸ್ತಿಗೆ ಹಾನಿಯುಂಟುಮಾಡಿ ಒಬ್ಬ ಜವಾಬ್ದಾರಿಯುತ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತಿಸುವುದರೊಂದಿಗೆ ಕರ್ತವ್ಯದಲ್ಲಿ ಸತ್ಯ, ನಿಷ್ಠೆ ಹಾಗೂ ಪ್ರಾಮಾಣಿಕತೆಯನ್ನು ತೋರಿಸಲು ವಿಫಲರಾಗಿ ಕರ್ನಾಟಕ ನಾಗರೀಕ ಸೇವಾ ನಡತೆ (ವರ್ತನೆ) ನಿಯಮಗಳು 1966 ರ ನಿಯಮ 3(1) ರ ಉಪನಿಯಮ (i) (ii) ಮತ್ತು (iii) ನ್ನು ಮತ್ತು ನಿಯಮ 29 ನ್ನು ಉಲ್ಲಂಘಿಸಿರುವ ಆರೋಪಕ್ಕೆ ವಿಚಾರಣಾಧಿಕಾರಿಗಳ ಅಂತಿಮ ವರದಿಯಿಂದ ಸಾಬೀತಾಗಿದೆಯೆಂದು ಶಿಸ್ತು ಪ್ರಾಧಿಕಾರವು ತೀರ್ಮಾನಿಸಿ, ಆರೋಪಿತರ ವಿರುದ್ಧದ ವಿಚಾರಣಾ ವರದಿಯನ್ನು ಅಂಗೀಕರಿಸಿ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಂಡ ಶಿಸ್ತು ಪ್ರಾಧಿಕಾರವು ಈ ಕೆಳಗಿನಂತೆ ಆದೇಶಿಸಿರುತ್ತದೆ.

**ನಿರ್ದೇಶಕರ ಆದೇಶ ಸಂಖ್ಯೆ: ಡಿಟಿಇ 05 ಡಿಇಕ್ಯೂ(1)2007, ಬೆಂಗಳೂರು ದಿನಾಂಕ: 20 ನೇ ಆಗಸ್ಟ್ 2013**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಾವಳಿ 1957ರ ನಿಯಮ II ನಿಯಮ 8(vi) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರಿ ಪಾಲಿಟೆಕ್ನಿಕ್, ಕಾರವಾರ ಇಲ್ಲಿ ದ್ವಿತೀಯ ದರ್ಜೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ರವಿ ನಾಯ್ಕ (ಅಮಾನತ್ತಿನಲ್ಲಿರುವ) ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ **ಸರ್ಕಾರಿ ಸೇವೆಯಿಂದ ಈ ಮೂಲಕ ಕಡ್ಡಾಯ ನಿವೃತ್ತಿಗೊಳಿಸಿದೆ.**

ನಿರ್ದೇಶಕರು
ಹಾಗೂ ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರ
ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು

**PR.2379**
**SC.10**

## ಉಪನಿರ್ದೇಶಕರ ಕಛೇರಿ, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ತುಮಕೂರು–572102

**ಅಧಿಸೂಚನೆ ಸಂಖ್ಯೆ:ಗಭೂಇ/ಉನಿತು/ಅಧಿಸೂಚನೆ/2013–14/4698, ದಿನಾಂಕ: 01/01/2014**

**ವಿಷಯ:** ತುಮಕೂರು ಜಿಲ್ಲೆಯ ಕೊರಟಗೆರೆ ತಾಲ್ಲೂಕಿನಲ್ಲಿನ ಕಲ್ಲು ಪುಡಿ ಮಾಡುವ ಘಟಕಗಳಿಗೆ ಸುರಕ್ಷಿತ ವಲಯ ನಿಗಧಿಪಡಿಸುವ ಕುರಿತು.

**ಉಲ್ಲೇಖ:**
1. ಕಟ್ಟಡ ಕಲ್ಲು ಪುಡಿ ಮಾಡುವ ಘಟಕಗಳ ನಿಯಂತ್ರಣ ನಿಯಮ 2011
2. ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯವರ ಪತ್ರ ಸಂಖ್ಯೆ: ಪಿಸಿಬಿ /ಎಂ.ಐ.ಎನ್/ 2013–14/4991 ದಿನಾಂಕ 31/12/2013
3. ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯವರ ಪತ್ರ ಸಂಖ್ಯೆ:ಪಿಸಿಬಿ–88/ ಎಂ.ಐ.ಎನ್ /2012–13/7156 ದಿನಾಂಕ:22/2/2013

ಕರ್ನಾಟಕ ಕಲ್ಲು ಪುಡಿ ಮಾಡುವ ಘಟಕಗಳ ನಿಯಂತ್ರಣ ನಿಯಮಾವಳಿ 2011 ರ ಅನ್ವಯ ಕೊರಟಗೆರೆ ತಾಲ್ಲೂಕ್ಕಿನ ವಿವಿಧ ಗ್ರಾಮಗಳ ವ್ಯಾಪ್ತಿಯಲ್ಲಿ ಗುರುತಿಸಿರುವ ಸುರಕ್ಷಿತ ವಲಯಗಳನ್ನು ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯು ಉಲ್ಲೇಖಿತ ಪತ್ರ(2)ರನ್ವಯ ಅನುಮೋದಿಸಲ್ಪಟ್ಟಿದ್ದು ವಿವರ ಈ ಕೆಳಕಾಣಿಸಿದಂತಿದೆ.

| ಕ್ರ.ಸಂ. | ತಾಲ್ಲೂಕು | ಗ್ರಾಮ | ಸರ್ವೆ ನಂ. | ವಿಸ್ತೀರ್ಣ ಎಕರೆಗಳಲ್ಲಿ | ಭೂಮಿ ವಿವರ |
|---|---|---|---|---|---|
| 1. | ಕೊರಟಗೆರೆ | ಬುಕ್ಕಾಪಟ್ಟಣ | 209 | 3–29 | ಪಟ್ಟಾ ಭೂಮಿ |
| | | ಬುಕ್ಕಾಪಟ್ಟಣ | 117 | 3–00 | ಸರ್ಕಾರಿ ಖರಾಬು |
| | | **ಒಟ್ಟು** | | **6–29** | |
| 2. | ಕೊರಟಗೆರೆ | ಗೌರಿಕಲ್ಲು | 40/1 | 2–05 | ಪಟ್ಟಾ ಭೂಮಿ |
| | | ಗೌರಿಕಲ್ಲು | 42/1 | 3–00 | ಪಟ್ಟಾ ಭೂಮಿ |
| | | **ಒಟ್ಟು** | | **5–05** | |
| 3 | ಕೊರಟಗೆರೆ | ಕಂತೇವಡೇರಹಳ್ಳಿ | 16 | 6–20 | ಸರ್ಕಾರಿ ಖರಾಬು |
| | | **ಒಟ್ಟು** | | **6–20** | |
| 4 | ಕೊರಟಗೆರೆ | ಮುಗ್ಗೋಂಡನಹಳ್ಳಿ | 37 | 1–00 | ಪಟ್ಟಾ ಭೂಮಿ |
| | | | 27 | 4–00 | ಸರ್ಕಾರಿ ಗೋಮಾಳ |
| | | **ಒಟ್ಟು** | | **5–00** | **ಎಕರೆ** |
| 5 | ಕೊರಟಗೆರೆ | ಹೊಲತಾಳು | 98 | 5–00 | ಪಟ್ಟಾ ಭೂಮಿ |
| | | **ಒಟ್ಟು** | | **5–00** | |
| 6 | ಕೊರಟಗೆರೆ | ಹೊಲತಾಳು | 98 | 5–00 | ಪಟ್ಟಾ ಭೂಮಿ |
| | | **ಒಟ್ಟು** | | **5–00** | |
| 7 | ತುಮಕೂರು | ಮೈದಾಳ | 19/1, 18/1, 18/2, 14/1, 14/2, 15 | 13–08 | ಪಟ್ಟಾ ಭೂಮಿ |
| | | | 20 | 141.04 | ಸರ್ಕಾರಿ ಖರಾಬು |
| | | **ಒಟ್ಟು** | | **154.12** | |
| 8 | ತುಮಕೂರು | ಚೌಳಂಬಳ್ಳಿ | 17 | 13.20 | ಸರ್ಕಾರಿ ಗೋಮಾಳ |
| | | **ಒಟ್ಟು** | | **13.20** | |

ಮೇಲೆ ತಿಳಿಸಿದ ಪ್ರದೇಶದಲ್ಲಿ ಕಲ್ಲು ಪುಡಿ ಮಾಡುವ ಘಟಕಗಳನ್ನು ಸ್ಥಾಪಿಸಲು ಇಚ್ಚಿಸುವ ಸಾರ್ವಜನಿಕರು/ಸಂಘ ಸಂಸ್ಥೆಗಳು, ಸರ್ಕಾರ ನಿಗಧಿಪಡಿಸಿದ ಅರ್ಜಿ ನಮೂನೆ "ಎ" ರಲ್ಲಿ ಪೂರ್ಣ ವಿವರ ಹಾಗೂ ಸಂಬಂಧಪಟ್ಟ ದಾಖಲೆಗಳೊಂದಿಗೆ ಸದಸ್ಯ ಕಾರ್ಯದರ್ಶಿ, ಜಿಲ್ಲಾ ಕಲ್ಲು ಪುಡಿ ಮಾಡುವ ಘಟಕಗಳ ನಿಯಂತ್ರಣ ಸಮಿತಿ, ತುಮಕೂರು ಜಿಲ್ಲೆ, ತುಮಕೂರು ಇವರಿಗೆ ಅರ್ಜಿ ಸಲ್ಲಿಸಲು ತಿಳಿಯಪಡಿಸಿದೆ.

**ಉಪ ನಿರ್ದೇಶಕರು ಹಾಗೂ ಸದಸ್ಯ ಕಾರ್ಯದರ್ಶಿ,**
ಜಿಲ್ಲಾ ಕಲ್ಲು ಪುಡಿ ಮಾಡುವ ಘಟಕಗಳ ನಿಯಂತ್ರಣಾ ಸಮಿತಿ,
ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ತುಮಕೂರು ಜಿಲ್ಲೆ, ತುಮಕೂರು

**ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು**
ಜಿಲ್ಲಾ ಕಲ್ಲು ಪುಡಿ ಮಾಡುವ ಘಟಕಗಳ ನಿಯಂತ್ರಣಾ ಸಮಿತಿ,
ತುಮಕೂರು ಜಿಲ್ಲೆ, ತುಮಕೂರು.

PR.14

SC.100

## OFFICE OF THE ASSISTANT COMMISSIONER OF COMMERCIAL TAXES,LVO- 420, BAGALKOT

### NOTIFICATION ACCT/LVO-420/GN/03/2013-14 dt. 29.10.2013

Notified authority under Rule 6(i) of the CST (Karnataka) Rules 1957.

By virtue of provisions of Rule12(2) of the CST (R & T) Rules 1957, it is hereby notified for General information that the declaration in Form-C issued to M/s Tulasi Granites by M/s Shree Kanak Lakshmi Granites, shown below is declared lost in the custody of selling dealer M/s Tulasi Granites.

| Sl. No. of declaration Form C lost | Name , address of the dealer to whom declaration Form C is issued | Name & address of the dealer who issued declaration Form C | Date of issue of Form C | Amount for which Form C is issued | Remarks |
|---|---|---|---|---|---|
| PQ/Y 0759758 | M/s Tulasi Granites, Ilkal, Taluk : Hunagund, Dist.: Bagalkot (Karnataka) TIN29270009224 | M/s Shree Kanak Lakshmi Granites At 250, Rasulgarh, Bubaneswar, Dist: khurda (Orissa) TIN31251112063 | 10.03.2010 | Rs.5,38,866=00 | Selling dealer has lodged FIR at jurisdictional police station, published in local news paper& executed Indemnity Bond in Form G regarding loss of Form C. |

ASSISTANT COMMISSIONER OF COMMERCIAL TAXES,LVO- 420, BAGALKOT

PR.2400

## OFFICE OF THE ASSISTANT COMMISSIONER OF COMMERCIAL TAXES,LVO- 420, BAGALKOT

### NOTIFICATION ACCT/LVO-420/GN/02/2013-14 dt. 29.10.2013

Notified authority under Rule 6(i) of the CST (Karnataka) Rules 1957.

By virtue of provisions of Rule12(2) of the CST (R & T) Rules 1957, it is hereby notified for General information that the declaration in Form-C issued to M/s Paras Ventures Pvt. Ltd. by M/s Gopani Iron and Power India Pvt. Ltd. shown below is declared lost in the custody of selling dealer M/s Paras Ventures Pvt Ltd.

| Sl. No. of declaration Form C lost | Name , address of the dealer to whom declaration Form C is issued | Name & address of the dealer who issued declaration Form C | Date of issue of Form C | Amount for which Form C is issued | Remarks |
|---|---|---|---|---|---|
| MH 11/ 0442134 | M/s Paras Ventres Pvt. Ltd Main Road, Amingad, Tq;Hunagund, Dist.: Bagalkot (Karnataka) TIN 29570600177 | M/s Gopani Iron and Power India Pvt. Ltd. Chandrapur (Maharastra) TIN 27690339796 | 17.09.2011 | Rs.28069596=00 | Selling dealer has lodged FIR at jurisdictional police station, published in local news paper& executed Indemnity Bond in Form G regarding loss of Form C. |

ASSISTANT COMMISSIONER OF COMMERCIAL TAXES,LVO- 420, BAGALKOT

PR.2399